# ಸಮುದಾಯ
# ಶಾಲಾ ಚಳುವಳಿ

ವಂ। ಕ್ಲಾಡ್ ಡಿ'ಸೋಜ, ಜೇ. ಸ.
ಬಿ. ಎಲ್. ಅಗೇರ

---

ಕನ್ನಡಕ್ಕೆ :
ಡಾ. ಎಚ್. ಎಸ್. ವೆಂಕಟೇಶಮೂರ್ತಿ
ನರಹಳ್ಳಿ ಬಾಲಸುಬ್ರಹ್ಮಣ್ಯ

# ಸಮುದಾಯ ಶಾಲಾ ಚಳುವಳಿ






ವಂ| ಕ್ಲಾಡ್ ಡಿ'ಸೋಜ, ಜೇ. ಸ.

ಬಿ. ಎಲ್. ಅಗೇರ

ಕನ್ನಡಕ್ಕೆ :

ಡಾ. ಎಚ್. ಎಸ್. ವೆಂಕಟೇಶಮೂರ್ತಿ

ನರಹಳ್ಳಿ ಬಾಲಸುಬ್ರಹ್ಮಣ್ಯ

ಸಮುದಾಯ ಶಾಲಾ ಚಳುವಳಿ—ವಂ। ಕ್ಲಾಡ್ ಡಿ'ಸೋಜ ಮತ್ತು ಬಿ. ಎಲ್. ಅಗೇರ—ಕನ್ನಡಾನುವಾದ—ಡಾ. ಎಚ್. ಎಸ್. ವೆಂಕಟೇಶಮೂರ್ತಿ ಮತ್ತು ನರಹಳ್ಳಿ ಬಾಲಸುಬ್ರಹ್ಮಣ್ಯ



1988

ಪ್ರತಿಗಳಿಗೆ :

Centre for Non-Formal & Continuing Education
Ashirvad
30, St. Marks Road
Bangalore-560 001

ಮುದ್ರಕರು :

ನೇತ್ರಾ ಪ್ರಿಂಟರ್ಸ್
6ನೇ ರಸ್ತೆ, ಚಾಮರಾಜಪೇಟೆ, ಬೆಂಗಳೂರು-18

# ಸಮುದಾಯ ಶಾಲಾ ಚಳುವಳಿ

## ಪ್ರಸ್ತಾವನೆ

ಶೋಷಿತವರ್ಗದಲ್ಲಿ ವ್ಯಕ್ತಿ ಶಕ್ತಿ ಹಾಗೂ ಸಂಘಶಕ್ತಿಯನ್ನು ಬೆಳೆಸಿ ಆತ್ಮ ವಿಶ್ವಾಸವನ್ನು ಮೂಡಿಸುವುದು, ಶಿಕ್ಷಣಕ್ಷೇತ್ರದಲ್ಲಿ ಸಮಗ್ರ ಚಳುವಳಿಯೊಂದಕ್ಕೆ ಪ್ರೇರಕ ವಾಗುವುದು, ತನ್ಮೂಲಕ ಒಟ್ಟಾರೆ ಸಮಾಜದ ಬದಲಾವಣೆಗೆ ಕಾರಣವಾಗುವುದು ಸಮುದಾಯ ಶಾಲಾ ಚಳುವಳಿಯ ಉದ್ದೇಶ (ಸ. ಶಾ. ಚ.). ಈಗ ಅಸ್ತಿತ್ವದಲ್ಲಿರುವ ಸಮುದಾಯ ಶಾಲೆಗಳ ಉದ್ದೇಶಕ್ಕಿಂತ ಇದು ತೀರ ಭಿನ್ನವಾದದ್ದು. ಶಾಲೆಗಳಿಗೆ ಬರುವ ಮಕ್ಕಳನ್ನು ಮಾತ್ರ ಇದು ತನ್ನ ಗುರಿಯಾಗಿ ಇರಿಸಿಕೊಂಡಿಲ್ಲ. ಇಡೀ ಸಮುದಾಯವನ್ನು, ಅದರಲ್ಲೂ ಗ್ರಾಮೀಣ ಪ್ರದೇಶದ ಅಸಂಖ್ಯಾತ ಅಸಹಾಯಕ ಜನತೆಯನ್ನು ಇದು ಗಮನದಲ್ಲಿರಿಸಿಕೊಂಡಿದೆ.

'ಸ.ಶಾ.ಚ'ದ ಒಟ್ಟಾರೆ ಉದ್ದೇಶವನ್ನು ಗಮನದಲ್ಲಿರಿಸಿಕೊಂಡು ಜನ ಸಮುದಾಯವನ್ನು ಅನೇಕ ಗುಂಪುಗಳನ್ನಾಗಿ ಮಾಡಿಕೊಳ್ಳಬೇಕು. ವಯಸ್ಕರು, ಸ್ತ್ರೀಯರು, ಪ್ರಾಥಮಿಕ ಶಾಲಾ ವಯಸ್ಸಿನ ಮಕ್ಕಳು, ಶಾಲೆ ಬಿಟ್ಟವರು, ಹದಿ ಹರಯದವರು, ಶಾಲೆಗೆ ಇನ್ನೂ ಸೇರಿರದ ಮಕ್ಕಳು–ಹೀಗೆ ವಿವಿಧ ಗುಂಪುಗಳನ್ನು ಮಾಡಿಕೊಂಡು ಸಾಂಪ್ರದಾಯಿಕ ಹಾಗೂ ಹೊಸಬಗೆಯ ಶಿಕ್ಷಣದ ಮೂಲಕ ಕಲಿಕೆಯ ವಾತಾವರಣವೊಂದನ್ನು ನಾವು ಸೃಷ್ಟಿಸಬೇಕಾಗಿದೆ. ಇದು ಜನಸಮುದಾಯದಲ್ಲಿ ಜಾಗೃತಿಯನ್ನು ಮೂಡಿಸುವುದು ಮಾತ್ರವಲ್ಲ, ಆತ್ಮವಿಶ್ವಾಸದ ಜೊತೆಗೆ ಸಾಮಾಜಿಕ, ಸಾಂಸ್ಕೃತಿಕ, ತಾಂತ್ರಿಕ ನೈಪುಣ್ಯಗಳನ್ನು ಗಳಿಸಿಕೊಳ್ಳಲೂ ನೆರವಾಗುತ್ತದೆ. ಜನತೆ ಒಗ್ಗಟ್ಟಾಗಿ ನಿಂತು ತಮ್ಮ ನ್ಯಾಯಬದ್ಧ ಹಕ್ಕುಗಳಿಗಾಗಿ ಹೋರಾಡುವ ಮನೋಭಾವ ವನ್ನು ಇದು ಬೆಳೆಸುತ್ತದೆ. ಸೃಜನಶೀಲ ಶಕ್ತಿ ಹಾಗೂ ಪ್ರಗತಿಶೀಲ ಮನೋಭಾವ ವನ್ನು ಪಡೆದುಕೊಳ್ಳುವ ಜನ ನಾಡಿನ ಪ್ರಮುಖ ಘಟನೆಗಳಲ್ಲಿ, ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವ ಶಕ್ತಿ ಪಡೆದುಕೊಳ್ಳುತ್ತಾರೆ.

'ಸಶಾಚ'ವು ಹೊಸದಾಗಿ ರೂಪುಗೊಳ್ಳುತ್ತಿರುವ ಚಳುವಳಿಯಾದ್ದರಿಂದ ಪ್ರಾಯೋಗಿಕವಾಗಿ ಹಾಗೂ ತಾತ್ವಿಕವಾಗಿ ಪರಸ್ಪರ ಚರ್ಚೆ ಹಾಗೂ ಪ್ರಶ್ನೆಗಳ

ಮೂಲಕ ಇದು ಬೆಳೆಯಬೇಕಾಗಿದೆ. ಈ ಪುಸ್ತಕ ಸಶಾಚ ಚಳುವಳಿಯನ್ನು ಕುರಿತು ಪುನರಾಲೋಚಿಸುವಂತೆ ಮಾಡುವ ಒಂದು ಪ್ರಯತ್ನ. ಈಗಾಗಲೇ ಅಸ್ತಿತ್ವದಲ್ಲಿರುವ 13 ಸಮುದಾಯ ಶಾಲೆಗಳ ಜೊತೆಗೆ ಹೊಸ ಹೊಸ ಸಮುದಾಯ ಶಾಲೆಗಳು ರೂಪುಗೊಳ್ಳುತ್ತಿರುವ ಸಂದರ್ಭದಲ್ಲಿ ಈ ಬಗ್ಗೆ ಚರ್ಚೆ ಅಗತ್ಯವಾದುದು. ಶೋಷಿತ ಜನಾಂಗ ವೈಯಕ್ತಿಕವಾಗಿ ಹಾಗೂ ಒಂದು ಸಮುದಾಯವಾಗಿ ಬೆಳೆದು, ಒಟ್ಟು ಸಮಾಜದ ಒಂದಂಗವಾಗಿ ತಾವು ಪಡೆಯಬೇಕಾದ್ದನ್ನು ಪಡೆಯುವ ಶಕ್ತಿಯಾಗಿ ರೂಪುಗೊಳ್ಳಬೇಕಾಗಿರುವ ಪ್ರಸ್ತುತ ಸಂದರ್ಭದಲ್ಲಿ 'ಸಶಾಚ' ಚಳುವಳಿಯ ಬಗ್ಗೆ ನಾವು ಗಂಭೀರವಾಗಿ ಯೋಚಿಸಬೇಕಾಗಿದೆ.

# ಸಮುದಾಯ ಶಾಲಾ ಚಳುವಳಿ

## ಒಂದು ಜನತಾ ಚಳುವಳಿ

**ಪ್ರವೇಶ :**

ನಾಲ್ಕು ದಶಕಗಳ ಶೈಕ್ಷಣಿಯ ಚಟುವಟಿಕೆಗಳ ನಂತರವೂ ನಮ್ಮ ದೇಶದಲ್ಲಿ ಕೇವಲ ಕೆಲವೇ ಜನರು ಮಾತ್ರ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಉಪಯುಕ್ತ ವಾಗುವಂತಹ ನಿಜವಾದ ಅರ್ಥದ ಶಿಕ್ಷಣ ಪಡೆದಿದ್ದಾರೆ. 'ಶಿಕ್ಷಣ ಚಳುವಳಿ ವ್ಯಾಪಕ ವಾಗಿ ಹರಡಲು ಸೂಕ್ತ ಕ್ರಮಗಳನ್ನು ಕೈಗೊಳ್ಳದಿದ್ದಲ್ಲಿ ಪ್ರಾದೇಶಿಕ ಅಸಮಾನತೆ, ಆರ್ಥಿಕ ಅಸ್ಥಿರತೆ ಹಾಗೂ ಸಾಮಾಜಿಕ ಅನ್ಯಾಯಗಳು ಇನ್ನೂ ವಿಸ್ತೃತಗೊಂಡು ಸಮಾಜವನ್ನೇ ವಿಚ್ಛಿದ್ರಗೊಳಿಸುವ ಸಾಧ್ಯತೆಯಿದೆಯೆಂದು' 1985ರಲ್ಲಿ ಶಿಕ್ಷಣ ಸಚಿವಾಲಯ ಪ್ರಕಟಿಸಿದ '**ಶಿಕ್ಷಣದ ಸವಾಲುಗಳು–ಒಂದು ನೀತಿ ಸಂಹಿತೆ**' ಯಲ್ಲಿ ಎಚ್ಚರಿಸಲಾಗಿದೆ. ಸರಿಯಾದ ಶಿಕ್ಷಣದಿಂದ ಮಾತ್ರ ಜನರಲ್ಲಿ ಆತ್ಮವಿಶ್ವಾಸವನ್ನೂ, ಯುಕ್ತಾಯುಕ್ತ ವಿವೇಚನೆಯನ್ನೂ ಉಂಟುಮಾಡಲು ಸಾಧ್ಯ. ಇದು ದೇಶದ ಐಕ್ಯತೆಗೆ, ಸಾರ್ಥಕ ಬದುಕಿಗೆ ಹಾಗೂ ಅರ್ಥಪೂರ್ಣ ಸಮಾಜ ನಿರ್ಮಾಣಕ್ಕೆ ಅತ್ಯಂತ ಅವಶ್ಯಕವಾದುದು.

ರಾಷ್ಟ್ರೀಯ ಶಿಕ್ಷಣ ಯೋಜನೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಣಕ್ಕಿರುವ ಶೋಚನೀಯ ಸ್ಥಿತಿ ಸರ್ವವಿದಿತ. ಈಗಲೂ ನಮ್ಮ ದೇಶದಲ್ಲಿ ಶೇಕಡಾ 73 ಮಕ್ಕಳು ಪ್ರಾಥಮಿಕ ಶಾಲೆಯ ವಿದ್ಯಾಭ್ಯಾಸದ ಹಂತವನ್ನೂ (7 ಅಥವಾ 8ನೇ ತರಗತಿ) ಮುಗಿಸುವುದಿಲ್ಲ. ನೂರಕ್ಕೆ ತೊಂಬತ್ತು ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಗಳಿದ್ದೂ ಸಹ ಸ್ವಾತಂತ್ರ್ಯ ಬಂದು ನಲವತ್ತು ವರ್ಷಗಳ ನಂತರವೂ ನಮ್ಮ ದೇಶದ ಅನಕ್ಷರತಾ ಪ್ರಮಾಣ ಶೇಕಡಾ 63. ಹೊಸ ಶಿಕ್ಷಣ ಚಳುವಳಿಯೊಂದು ರೂಪುಗೊಳ್ಳದಿದ್ದಲ್ಲಿ ಈ ಪರಿಸ್ಥಿತಿ ಇನ್ನೂ ಉಲ್ಬಣಿಸುತ್ತದೆ ಎಂಬುದರಲ್ಲಿ ಕಿಂಚಿತ್ತೂ ಅನುಮಾನವಿಲ್ಲ. ಸಾಕ್ಷರತಾ ಪ್ರಮಾಣ ಶೇಕಡಾ 37 ಎಂದು ನಾವೇನೂ ಸಮಾಧಾನಪಟ್ಟುಕೊಳ್ಳುವಂತಿಲ್ಲ. ಏಕೆಂದರೆ ಇವರು ಪಡೆದಿರುವ ಶಿಕ್ಷಣದ ಗುಣಮಟ್ಟ ಯಾವ ರೀತಿಯದು ಎಂಬುದನ್ನು ಗಮನಿಸಿದರೆ ನಮಗೆ ನಿರಾಸೆಯೇ ಆಗುತ್ತದೆ. ನಮ್ಮ ಅನೇಕ ಪ್ರಾಥಮಿಕ ಶಾಲೆಗಳಲ್ಲಿ ಒಂದೇ ಕೊಠಡಿಯಲ್ಲಿ ನಾಲ್ಕೈದು ತರಗತಿಗಳನ್ನು ನಡೆಸಲಾಗುತ್ತಿದೆ. ಸರಿಯಾದ ಶಿಕ್ಷಣ ಸಹಾಯಕ ಸಾಮಗ್ರಿಗಳಿಲ್ಲ. ಶೇಕಡಾ 62 ಶಾಲೆಗಳಲ್ಲಿ ಒಬ್ಬರು ಅಥವಾ ಇಬ್ಬರು ಉಪಾಧ್ಯಾಯರುಗಳು ಮಾತ್ರ ಇದ್ದಾರೆ. ಯಾವ ರೀತಿಯ ಕನಿಷ್ಠ ಅನುಕೂಲಗಳೂ ಇಲ್ಲದ ಇಂತಹ ಪರಿಸ್ಥಿತಿಯಲ್ಲಿ ಜನತೆಯ ಆಸಕ್ತಿಯನ್ನು ಶಿಕ್ಷಣದ ಕಡೆಗೆ ಸೆಳೆಯುವುದು ಕಷ್ಟಸಾಧ್ಯ.

ಪ್ರಸಕ್ತ ಶಿಕ್ಷಣ ಪದ್ಧತಿಯಲ್ಲಿ 6 ರಿಂದ 14 ವಯಸ್ಸಿನ 192 ದಶಲಕ್ಷ ಮಕ್ಕಳಲ್ಲಿ 144 ದಶಲಕ್ಷ ಮಕ್ಕಳು, ಸೇರಿದಂತೆ ಒಟ್ಟಾರೆಯಾಗಿ 500 ದಶಲಕ್ಷ ಅನಕ್ಷರಸ್ತರು (ಜಗತ್ತಿನ ಅರ್ಧದಷ್ಟು ಅನಕ್ಷರಸ್ತರು) ಯಾವ ರೀತಿಯ ಶಿಕ್ಷಣವನ್ನೂ ಪಡೆಯದೆ 21ನೇ ಶತಮಾನವನ್ನು ಪ್ರವೇಶಿಸುತ್ತಿದ್ದಾರೆ ಎಂಬ ಭೀಕರ ಸತ್ಯ ನಮ್ಮನ್ನು ಗಂಭೀರ ಚಿಂತನೆಗೆ ಗುರಿಮಾಡುತ್ತದೆ. ಹೊಸ ಶಿಕ್ಷಣ ಪದ್ಧತಿಯನ್ನು ರೂಪಿಸುವ, ಇರುವ ಶಿಕ್ಷಣ ಪದ್ಧತಿಯನ್ನು ಸುಧಾರಿಸುವ ಯಾವ ಪ್ರಯತ್ನವನ್ನೂ ಮಾಡದ ನಮ್ಮ ಸರ್ಕಾರ ಹಾಗೂ ಖಾಸಗಿ ಶಿಕ್ಷಣ ಸಂಸ್ಥೆಗಳು 21ನೇ ಶತಮಾನದ ವೇಳೆಗೆ ಅನಕ್ಷರತೆಯನ್ನು ತೊಡೆದು ಹಾಕುತ್ತೇವೆ ಎಂದು ಹೇಳುತ್ತಿರುವುದು ತಮಾಷೆಯಾಗಿ ಕಾಣಿಸುತ್ತದೆ.

ಶಿಕ್ಷಣ ಪದ್ಧತಿಯಲ್ಲಿ ಮೂಲಭೂತ ಬದಲಾವಣೆಗಳಾಗದೆ, ಉಳ್ಳವರ ಹಾಗೂ ಇಲ್ಲದವರ ಸಂಬಂಧ ಈಗಿರುವಂತೆ ಯಥಾಸ್ಥಿತಿಯಲ್ಲಿಯೇ ಮುಂದುವರಿಯುತ್ತದೆ. ಶಿಕ್ಷಣವನ್ನು ಪಡೆಯುವಲ್ಲಿಯೂ ಸಹ ಇದೇ ತಾರತಮ್ಯವಿದೆ. ಈ ಸ್ಥಿತಿ ಸದ್ಯಕ್ಕಂತೂ ಬದಲಾಗುವ ಸೂಚನೆಗಳಿಲ್ಲ. ಆಧುನಿಕ ಜಗತ್ತನ್ನು ಅರ್ಥಮಾಡಿಕೊಳ್ಳಲು, ಸುತ್ತ ಮುತ್ತಲಿನ ಸಮಾಜದ ಅರಿವನ್ನು ಪಡೆಯಲು ಶಿಕ್ಷಣ ಹಾಗೂ ವಿಜ್ಞಾನ ಎರಡು ಪ್ರಮುಖ ಹಾದಿಗಳು. ಯಾವ ವ್ಯಕ್ತಿಯೂ ಈ ಅರಿವನ್ನು ಪಡೆಯುವುದರಿಂದ ವಂಚಿತನಾಗಬಾರದು. ಅಸಮಾನತೆ ಇಲ್ಲದ ಸಮಾಜ ನಿರ್ಮಾಣದಲ್ಲಿ ಶಿಕ್ಷಣದ ಪಾತ್ರ ಅತ್ಯಂತ ಮಹತ್ವದ್ದು ಎಂದು ಒಪ್ಪಿಕೊಂಡಲ್ಲಿ, ಹೆಚ್ಚಿನ ಸಂಖ್ಯೆಯಲ್ಲಿ ಶಾಲೆಗೆ ಬರುವ ಜನಸಾಮಾನ್ಯರ ಮಕ್ಕಳಿಗೆ ಉತ್ತಮ ಸೌಲಭ್ಯವನ್ನು ಒದಗಿಸಿಕೊಡುವ ಮೂಲಕ ಅತ್ಯುತ್ತಮ ಶಿಕ್ಷಣವನ್ನು ಕೊಡುವುದು ಸಾಧ್ಯವಾಗಬೇಕು. ಈಗ ಇದು ಆಗುತ್ತಿಲ್ಲ ವೆನ್ನುವುದು ಕಟುವಾಸ್ತವ. ಉದಾಹರಣೆಗೆ ಕರ್ನಾಟಕದ ಶಿಕ್ಷಣದ ಪರಿಸ್ಥಿತಿಯನ್ನೇ ಗಮನಿಸೋಣ. 20 ಜುಲೈ, 85ರ ಗಣತಿಯ ಪ್ರಕಾರ ಕರ್ನಾಟಕದಲ್ಲಿ 23,514 ಕಿರಿಯ ಪ್ರಾಥಮಿಕ ಶಾಲೆಗಳಿವೆ. ಅವುಗಳಲ್ಲಿ 16,017 ಶಾಲೆಗಳಲ್ಲಿ ಒಬ್ಬೊಬ್ಬರೇ ಅಧ್ಯಾಪಕರಿದ್ದಾರೆ. ಈ ಶಾಲೆಗಳಲ್ಲಿ ಹೆಸರು ನೊಂದಾಯಿಸಿರುವ ವಿದ್ಯಾರ್ಥಿಗಳ ಸಂಖ್ಯೆ 9,07,214. ಇದು ಒಟ್ಟು ಪ್ರಾಥಮಿಕಶಾಲಾ ವಿದ್ಯಾರ್ಥಿಗಳ ಶೇಕಡಾ 70 ರಷ್ಟಿದೆ. [ಆಕರ : ಕರ್ನಾಟಕ ಸರ್ಕಾರದ ಶಿಕ್ಷಣ ಗಣತಿ, ಶಿಕ್ಷಣ ಇಲಾಖೆ–1985] ಪ್ರಾಥಮಿಕ ಶಾಲೆಗೆ ಸೇರಿದ ಶೇಕಡಾ 70ರಷ್ಟು ಮಕ್ಕಳು ಆರಂಭದ ಹಂತದಲ್ಲಿಯೇ ಸೂಕ್ತ ಶೈಕ್ಷಣಿಕ ಸೌಲಭ್ಯಗಳಿಂದ ಹೀಗೆ ವಂಚಿತರಾಗಿ ಸಮಾಜದ ಮುಖ್ಯಪ್ರವಾಹದಿಂದ ಹೊರಗುಳಿಯುವಂಥ ಈ ಸ್ಥಿತಿಯಲ್ಲಿರುವಾಗ ನಾವು ತಾಳಬೇಕಾದ ನಿಲುವು ಯಾವುದು ? ಇಂತಹ ದೋಷಪೂರಿತ ಶಿಕ್ಷಣ ಪದ್ಧತಿ ನಮ್ಮ ಮಕ್ಕಳಲ್ಲಿ ಸಾಮಾಜಿಕ ಎಚ್ಚರವನ್ನು ಹೇಗೆ ತಾನೇ ಮೂಡಿಸೀತು ? ಮುಂದೆ ನಮ್ಮ ಮಕ್ಕಳು (ಈ ನಾಡಿನ ಭಾವೀ ಪ್ರಜೆಗಳು) ಹೇಗೆ ತಾನೇ ಪರಿಣಾಮಕಾರಿಯಾದ ಉತ್ತಮ ಬದುಕು ನಿರ್ವಹಿಸಲು ಸಾಧ್ಯವಾದೀತು ? ಮನುಷ್ಯ ಮನುಷ್ಯರ ನಡುವೆ ಹೆಡೆಯಾಡುತ್ತಿರುವ

ಅಸಮಾನತೆಯ ಕಡೆಗೆ ಅವರ ಗಮನ ಸೆಳೆಯುವುದು ಹೇಗೆ ? ಈ ಸಾಮಾಜಿಕ ಅನ್ಯಾಯಗಳನ್ನು ನಿವಾರಿಸಬೇಕು ಎಂಬ ಮನೋಭಾವವನ್ನು ಅವರಲ್ಲಿ ಮೂಡಿಸುವುದು ಹೇಗೆ ? ಸೂಕ್ತ ನಿರ್ಣಯ ಕೈಗೊಳ್ಳುವ ಹಾಗೂ ಕ್ರಿಯಾಶೀಲರಾಗುವ ಹಾದಿಯಲ್ಲಿ ಅವರನ್ನು ಸಿದ್ಧಗೊಳಿಸುವುದು, ಸತ್ಯ ಶೋಧನೆಯ ಮಾರ್ಗದಲ್ಲಿ ಒದಗುವ ಅಡೆತಡೆಗಳನ್ನು ಮೀರಿ ನಡೆಯುವಂತೆ ಮಾಡುವುದು, ಭಿನ್ನಾಭಿಪ್ರಾಯಗಳೊಡನೆ ಪರಸ್ಪರ ಗೌರವದಿಂದ ಸಹಜೀವನ ಮಾಡುವ ಮನೋಭಾವ ಕಲಿಸುವುದು, ಸಮೂಹ ಸಂಘಟನೆಗಳತ್ತ ಅವರ ಆಸಕ್ತಿ ರೂಢಿಸುವುದು ಹೇಗೆ ? ಎಲ್ಲಕ್ಕಿಂತ ಮುಖ್ಯವಾಗಿ ಎಲ್ಲರಿಗೂ ಸಾಮಾಜಿಕ ನ್ಯಾಯ ದೊರಕಿಸಿಕೊಡುವಲ್ಲಿ ನಿಜವಾದ ನಿಷ್ಠೆಯನ್ನು ರೂಪಿಸುವುದು ಹೇಗೆ ?

ಈ ಎಲ್ಲ ಪ್ರಶ್ನೆಗಳಿಗೆ ಉತ್ತರ ಸುಲಭವಲ್ಲ. ಸಾಂಪ್ರದಾಯಿಕ ಶಿಕ್ಷಣ ಪದ್ಧತಿಯಿಂದ ಇದು ಸಾಧ್ಯವಾಗಲಾರದು ಎಂಬ ಸತ್ಯ ಈಗಾಗಲೇ ನಮಗೆ ಮನವರಿಕೆಯಾಗಿದೆ. ಆದ್ದರಿಂದ ಬದಲಾವಣೆಯ ಬೀಜಗಳನ್ನು ನಾವು ಅನೇಕ ರೀತಿಗಳಲ್ಲಿ ಬಿತ್ತಬೇಕಾಗಿದೆ. 1978ರಲ್ಲಿ ನಾವು ಇಂಥ ಒಂದು ಸಣ್ಣ ಪ್ರಯತ್ನ ಆರಂಭಿಸಿದೆವು. ರಾಷ್ಟ್ರೀಯ ವಯಸ್ಕರ ಶಿಕ್ಷಣದ ಯೋಜನೆಯಡಿಯಲ್ಲಿ ವಯಸ್ಕರಲ್ಲಿ ಸಾಕ್ಷರತೆ ಹಾಗೂ ಜಾಗೃತಿಯನ್ನು ಉಂಟುಮಾಡುವ ಕಾರ್ಯಕ್ರಮವೊಂದನ್ನು ನಾವು ಹಾಕಿಕೊಂಡಿದ್ದೆವು, ಸಾಮಾಜಿಕ ಅಸಮಾನತೆಯ ವಿರುದ್ಧ ಹೋರಾಡುವ, ತಮ್ಮ ಹಕ್ಕುಬಾಧ್ಯತೆಗಳನ್ನು ಕಂಡುಕೊಳ್ಳುವ ಎಚ್ಚರವನ್ನು ದುರ್ಬಲವರ್ಗದಲ್ಲಿ ಮೂಡಿಸುವ ಮೂಲಕ, ಅವರಲ್ಲಿ ಸಂಘಟನಾಶಕ್ತಿಯನ್ನು ಬೆಳೆಸುವ ಹಿನ್ನೆಲೆಯಲ್ಲಿ ಈ ಕಾರ್ಯಕ್ರಮವನ್ನು ನಾವು ರೂಪಿಸಿದ್ದೆವು. ನಾವು ಕೆಲಸಮಾಡಿದ ಕಡೆಯಲ್ಲಿ ಅಲ್ಪಸ್ವಲ್ಪ ಬದಲಾವಣೆ ಸಾಧ್ಯವಾಗಿದೆ. ಮೂಲಭೂತ ಬದಲಾವಣೆಯನ್ನು ತರುವುದು ನಮಗೆ ಸಾಧ್ಯವಾಗದಿದ್ದರೂ ಶೋಷಿತ ಜನಾಂಗದಲ್ಲಿ ಆತ್ಮವಿಶ್ವಾಸವನ್ನು, ಅವರ ಹಕ್ಕುಬಾಧ್ಯತೆಯ ಬಗ್ಗೆ ಎಚ್ಚರವನ್ನು ಮೂಡಿಸುವಲ್ಲಿ ನಾವು ಸಫಲರಾದೆವು. ವಾಸ್ತವ ಸ್ಥಿತಿಯನ್ನು ಎದುರಿಸುವ ಛಾತಿ, ಬದಲಾವಣೆಯ ಬಯಕೆ ಅವರಲ್ಲಿ ಮೂಡುವಂತೆ ನಾವು ಮಾಡಿದ್ದೇವೆ. ಇದರಿಂದ ವಯಸ್ಕರಲ್ಲಿ ಸಾಕ್ಷರತಾ ಪ್ರಮಾಣ ಹೆಚ್ಚಾಯಿತೆಂಬುದು ನಿಜವಾದರೂ, ನಿರುಪಯುಕ್ತ ಪ್ರಾಥಮಿಕ ಶಾಲಾಶಿಕ್ಷಣ ಹಾಗೂ ಆ ಹಂತದಲ್ಲೇ ಶಿಕ್ಷಣವನ್ನು ನಿಲ್ಲಿಸಿದವರ ಸಂಖ್ಯೆ ಕಡಿಮೆಯಾಗದೆ ಹೆಚ್ಚಾಗುತ್ತಲೇ ಹೋದುದರಿಂದ ಸಹಜವಾಗಿ ನಿರಕ್ಷರಸ್ಥ ವಯಸ್ಕರ ಸಂಖ್ಯೆ ಬೆಳೆಯುತ್ತಲೇ ಹೋಯಿತು. ಆದ್ದರಿಂದ ವಯಸ್ಕರ ಶಿಕ್ಷಣ ಮತ್ತು ವಿಸ್ತೃತ ರೀತಿಯಲ್ಲಿ ಪ್ರಾಥಮಿಕ ಶಿಕ್ಷಣ ಒಂದೇ ಕಾಲದಲ್ಲಿ ನಡೆಯಬೇಕಾಗಿದೆ. ರಾಷ್ಟ್ರಜೀವನದಲ್ಲಿ ಕ್ರಿಯಾಶೀಲವಾಗಿ ಪಾಲ್ಗೊಳ್ಳಲು ನಮ್ಮ ಸಮುದಾಯವನ್ನು ಸಿದ್ಧಪಡಿಸಬೇಕಾದರೆ ಶಿಕ್ಷಣ ಪದ್ಧತಿಗೆ ಹೊಸ ರಕ್ತವನ್ನು ತುಂಬುವ ಕೆಲಸ ಅಗತ್ಯವಾಗಿ ಆಗಲೇಬೇಕಾಗಿದೆ.

**ಸ. ಶಾ. ಚ : ವಿವರಣೆ**

ಸಮಸ್ಯೆಯ ತೀವ್ರತೆಯನ್ನು ಗಮನದಲ್ಲಿ ಇಟ್ಟುಕೊಂಡು ಶೈಕ್ಷಣಿಕ ವಾತಾವರಣವನ್ನು ಸೃಷ್ಟಿಸಲು ಏಳು ಅಥವಾ ಎಂಟು ಕಿ.ಮೀ. ಸುತ್ತಳತೆಯ ಹಳ್ಳಿಗಳನ್ನು ಒಂದು ಗುಂಪು ಮಾಡಿಕೊಳ್ಳುವುದು ಯಾವುದೇ ಕಾರ್ಯಚಟುವಟಿಕೆಗೂ ಅತ್ಯಂತ ಅಗತ್ಯವಾದುದು. ಈ ರೀತಿ ಗುಂಪು ಮಾಡಿಕೊಂಡು ಅಲ್ಲಿಯ ಜನಸಮುದಾಯದಲ್ಲಿ ಬದುಕಿನ ಬಗ್ಗೆ ಉತ್ಸಾಹ ಮೂಡಿಸುವುದು; ಸುತ್ತಮುತ್ತಲಿನ ಸಮಾಜವನ್ನು ಅರ್ಥಮಾಡಿಕೊಳ್ಳುವ ವಿವೇಕವನ್ನು ಬೆಳೆಸುವುದು ಹಾಗೂ ಅವರು ತಮ್ಮ ಬದುಕಿನ ಅನೇಕ ಸಾಧ್ಯತೆಗಳನ್ನು ಕಂಡುಕೊಳ್ಳುವಂತೆ ಮಾಡುವುದು ನಮ್ಮ ಉದ್ದೇಶ. ವೃದ್ಧರು ಹಾಗೂ ಯುವಕರ ನಡುವೆ ವಿಚಾರ ವಿನಿಮಯ, ಹಳ್ಳಿ ಹಳ್ಳಿಗಳ ನಡುವೆ ಶಿಕ್ಷಣದ ಮಹತ್ವವನ್ನು ಕುರಿತು ಚರ್ಚೆ, ತಮ್ಮ ಪರಿಸರದ ಸಂಪನ್ಮೂಲಗಳನ್ನು ಸರಿಯಾಗಿ ಬಳಸಿಕೊಳ್ಳುವ ಬಗ್ಗೆ ತಿಳುವಳಿಕೆ, ಬೌದ್ಧಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳ ಅರಿವು–ಇತ್ಯಾದಿ ವಿವಿಧ ರೀತಿಯ ಕಾರ್ಯಕ್ರಮಗಳ ಮೂಲಕ ಜನರಲ್ಲಿ ಅರಿವು ಮೂಡಿಸಲು ನಾವು ಪ್ರಯತ್ನಿಸುತ್ತೇವೆ. ಪ್ರಾಥಮಿಕ ಶಾಲೆಗಳು ಸರಿಯಾಗಿ ಕಾರ್ಯನಿರ್ವಹಿಸುವಂತೆ ಜನರೇ ನೋಡಿಕೊಳ್ಳಬೇಕು. ಅಷ್ಟೇ ಅಲ್ಲ ತಮ್ಮ ಮಕ್ಕಳು ಪ್ರಾಥಮಿಕ ಶಾಲಾ ಶಿಕ್ಷಣವನ್ನು ಸರಿಯಾಗಿ ಪಡೆಯಲು ಅದಕ್ಕೆ ಹಿನ್ನೆಲೆಯಾಗಿ ಬಾಲವಾಡಿಗಳನ್ನು ತೆರೆಯುವ ಅಗತ್ಯವನ್ನು ಅವರು ಮನಗಾಣಬೇಕು. ಒಟ್ಟಾರೆ ಶಿಕ್ಷಣ ಚಳುವಳಿಯೊಂದು ರೂಪುಗೊಳ್ಳದೆ ಇದೆಲ್ಲ ಸಾಧ್ಯವಾಗದು.

'ಸ. ಶಾ. ಚ'ವನ್ನು ನಾವು ಹೀಗೆ ವಿವರಿಸಬಹುದು : **ಇದು ಉತ್ತಮ ಶಿಕ್ಷಣಕ್ಕಾಗಿ ನಡೆಯುವ ಒಂದು ಜನತಾ ಚಳುವಳಿ. ಇದರ ಗುರಿ ಜನಶಕ್ತಿಯನ್ನು ರೂಪಿಸುವುದು. ಅದರಲ್ಲೂ ನತದೃಷ್ಟ ದುರ್ಬಲ ವರ್ಗದ ನಡುವೆ ಜನಶಕ್ತಿಯನ್ನು ರೂಪಿಸುವುದು, ಪ್ರಧಾನ ಉದ್ದೇಶ. ತನ್ಮೂಲಕ ಸಾಮಾಜಿಕ ಬದಲಾವಣೆಯೊಂದನ್ನು ತರಲು ಪ್ರಯತ್ನಿಸುವುದು.**

ಇಲ್ಲಿ ನತದೃಷ್ಟ ದುರ್ಬಲ ವರ್ಗವೆಂದರೆ–ಕಸಗುಡಿಸುವ ಜಾಡಮಾಲಿಗಳು, ಗುಡಿಸಲುವಾಸಿಗಳು, ಗಿರಿಜನರು, ಬೆಸ್ತರು, ಸಾಂಪ್ರದಾಯಿಕ ಕರಕುಶಲಿಗಳು, ಕೃಷಿ ಕಾರ್ಮಿಕರು, ನಗರದ ಅಸಂಘಟಿತ ಕಾರ್ಮಿಕರು, ಜೀತಗಾರರು. ಅದರಲ್ಲೂ ಈ ವರ್ಗಗಳಲ್ಲಿರುವ ಹೆಂಗಸರು ಮುಖ್ಯವಾಗಿ ಈ ಗುಂಪಿನೊಳಗೆ ಬರುತ್ತಾರೆ. ಇವರುಗಳಲ್ಲಿ ಹೆಚ್ಚಿನ ಜನರು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟವರ್ಗಕ್ಕೆ ಸೇರಿದಂಥವರು (ಹರಿಜನ ಗಿರಿಜನರು). ಸಾಮಾಜಿಕ ಅಸಮಾನತೆಗೆ ಗುರಿಯಾದ ಶೇಕಡಾ 15ರಷ್ಟು ಹರಿಜನ ಗಿರಿಜನರು ನಮ್ಮ ದೇಶದಲ್ಲಿದ್ದಾರೆ.

ಪ್ರಸಕ್ತ ಅಭಿವೃದ್ಧಿ ಯೋಜನೆಗಳಲ್ಲಿ ದುರ್ಬಲ ಜನಾಂಗದವರು ಕಡೆಗಣಿಸಲ್ಪಟ್ಟಿದ್ದಾರೆ. ಯೋಜನಾ ಚಟುವಟಿಕೆಗಳಿಂದ ಅವರು ಹೊರಗುಳಿದಿದ್ದಾರೆ. ಸಾಮಾಜಿಕ

ಅಸಮಾನತೆ ಹಾಗೂ ಅನ್ಯಾಯಗಳಿಗೆ ಗುರಿಯಾಗಿರುವುದರ ಬಗ್ಗೆ ಅವರಿಗೆ ಅರಿವಿದ್ದರೂ, ಅದರ ವಿರುದ್ಧ ದನಿಯೆತ್ತಲು ಅವರು ಹೆದರುತ್ತಾರೆ. ಹಾಗೆ ದನಿಯೆತ್ತಿದ್ದೇ ಆದರೆ ಸಂಪೂರ್ಣವಾಗಿ ನಾಶವಾಗಿ ಬಿಡಬಹುದೆಂಬ ಭಯ ಅವರಿಗಿದೆ. 'ಸಶಾಚ' ಜನರಿಂದ ಜನರಿಗಾಗಿ ರೂಪಿತವಾದ ಒಂದು ಸಾಮಾಜಿಕ ಚಳುವಳಿ. ಮುಖ್ಯವಾಗಿ ಇದೊಂದು ಶೈಕ್ಷಣಿಕ ಚಳುವಳಿ. ಸಮಾಜದಲ್ಲಿ ಉತ್ತಮ ಶೈಕ್ಷಣಿಕ ವಾತಾವರಣ ನಿರ್ಮಿಸುವುದು ಇದರ ಗುರಿ.

ಅನಿವಾರ್ಯವಾದ ಅಗತ್ಯದ ಫಲವಾಗಿ, ಜನಸಮುದಾಯದ ಸಾಂಕೇತಿಕ ಅಭಿವ್ಯಕ್ತಿಯ ಪರಿಣಾಮವಾಗಿ ಒಂದು ಚಳುವಳಿಯೇನೋ ಈಗ ರೂಪುಗೊಂಡಿದೆ. ಇದು ಒಂದು ನಿಶ್ಚಿತ ಗುರಿಯತ್ತ ಜನಸಮುದಾಯವನ್ನು ಒಯ್ಯಲಿದೆ. ವ್ಯಕ್ತಿಗಳೂ ಮತ್ತು ಸಮುದಾಯವೂ ಈ ಗುರಿಯ ಸಾಧನೆಗಾಗಿ ಈಗ ತೀವ್ರವಾಗಿ ತುಡಿಯ ತೊಡಗಿವೆ. ಬೇರೆ ಯಾವುದೇ ಅಂಶಕ್ಕಿಂತ ಇದಕ್ಕೆ ಹೆಚ್ಚಿನ ಮಹತ್ವವನ್ನು ಸಮುದಾಯವು ಈಗ ನೀಡತೊಡಗಿದೆ. ಅದಕ್ಕಾಗಿ ಯಾವುದೇ ಬಗೆಯ ತ್ಯಾಗಕ್ಕೂ ಅದು ಸಿದ್ಧವಾಗಿದೆ. ಇದರಿಂದ ಒದಗಬಹುದಾದ ಅನಾನುಕೂಲಗಳನ್ನು ದೃಢವಾಗಿ ಎದುರಿಸಲು ಮನಸ್ಸು ಮಾಡಿದೆ. ಇದೀಗ ಇದು ಒಂದು ಜನತಾ ಚಳುವಳಿಯಾಗಿ ರೂಪತಾಳಿದೆ. ಇದರ ಉದ್ದೇಶ ಸಮುದಾಯದ ಬದುಕನ್ನು ಮತ್ತು ಸಮಾಜದ ಪರಿಸರವನ್ನು ಅರ್ಥಮಾಡಿಕೊಂಡು ಸರಿಯಾದ ದಿಕ್ಕಿನತ್ತ ಅದನ್ನು ನಡೆಸುವುದೇ ಆಗಿದೆ. ವ್ಯಕ್ತಿವ್ಯಕ್ತಿಯ ನಡುವೆ, ವ್ಯಕ್ತಿ–ಪರಿಸರದ ನಡುವೆ ಸಂಬಂಧಗಳನ್ನು ಅರ್ಥ ಪೂರ್ಣವಾಗಿಸಿ, ಹೊಸ ಬಗೆಯ ಜೀವನಗ್ರಹಿಕೆ, ಚಿಂತನೆ ಮತ್ತು ಕ್ರಿಯಾಶೀಲತೆಗೆ ನಾಡಿನ ಸಮುದಾಯವನ್ನು ಸಿದ್ಧಗೊಳಿಸುವುದು ಚಳುವಳಿಯ ಮಹತ್ವದ ಗುರಿ.

ಈ ಚಳುವಳಿಯು ಜನತೆಗೆ ತನ್ನ ಶಕ್ತಿಯ ಅರಿವು ಮೂಡಿಸುತ್ತದೆ ; ಸಾಮಾಜಿಕ ಜೀವನದ ಬಗ್ಗೆ ಹೊಸ ಧೋರಣೆಗಳನ್ನು ರೂಪಿಸಲು ಸಹಕಾರ ನೀಡುತ್ತದೆ. ಒಟ್ಟಾರೆ ಇದು ಹೊಸ ಸಂಸ್ಥೆಗಳನ್ನು ಹೊಸಕಾರ್ಯಕ್ರಮಗಳನ್ನು ನಮಗೆ ಯೋಜಿಸಿಕೊಡುತ್ತದೆ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ ಈ ಚಳುವಳಿಯು ಇಡೀ ಸಮಾಜವನ್ನು ಹೆಚ್ಚು ಜೀವಂತ, ಚಲನಶೀಲ ಮತ್ತು ಅಖಂಡಗೊಳಿಸಿ ಪುನರ್ರಚಿಸುವತ್ತ ಮುಖಮಾಡಿದೆ.

ಶಿಕ್ಷಣವು ಅರಿವಿನ ಸ್ಫೋಟವನ್ನು ನಿರ್ಮಿಸುವ ಮುಖ್ಯ ಸಾಧನವಾಗಿದೆ. ಅದು ಸ್ವಾವಲಂಬನೆ ಮತ್ತು ಸ್ವಯಂಪೂರ್ಣತೆಯ ಕಡೆ ಜನತೆಯನ್ನು ನಡೆಸುತ್ತದೆ. ನಾಳಿನ ಶಿಕ್ಷಣ ಎದುರಿಸಬೇಕಾದ ನಿಜವಾದ ಸವಾಲೆಂದರೆ ಸಾಮಾಜಿಕ ಆರ್ಥಿಕ ಬೇಡಿಕೆಗಳಿಗೆ ಅಗತ್ಯವಾದ ಪ್ರಾಯೋಗಿಕ ವಿಧಾನವನ್ನು ಅಳವಡಿಸಿಕೊಳ್ಳುವುದು, ಹಾಗೂ ಸಾಂಸ್ಕೃತಿಕ ಪರಂಪರೆಗಳನ್ನು ವಾಸ್ತವ ನೆಲೆಯಲ್ಲಿ ಪರಿಶೀಲಿಸುವ ಮನೋಭಾವವನ್ನು ರೂಪಿಸುವುದೇ ಆಗಿದೆ.



ಶೈಶವದಿಂದ ಯೌವನದವರೆಗೆ, ಹುಟ್ಟಿನಿಂದ ಸಾವಿನವರೆಗೆ ಜನ ಸಾಂಸ್ಕೃತಿಕ ಮತ್ತು ಸಾಮಾಜಿಕ ಚೌಕಟ್ಟಿನೊಳಗೆ ಸಾಮಾಜಿಕೀಕರಣದ ಮೂಲಕ ಬದುಕಿ ಬೆಳೆಯುತ್ತಾರೆ. ಜ್ಞಾನವನ್ನು ಮತ್ತು ಸಾಮರ್ಥ್ಯವನ್ನು ನೀಡುವ ಶಿಕ್ಷಣವು ಸಾಂಸ್ಕೃತಿಕ ಮೌಲ್ಯಗಳನ್ನು ಮತ್ತು ಧೋರಣೆಗಳನ್ನು ಮುಂದಿನ ಜನಾಂಗಕ್ಕೆ ಮತ್ತು ಅವರ ಅಗತ್ಯಕ್ಕೆ ಹೊಂದುವಂತೆ ಪ್ರದಾನ ಮಾಡುತ್ತಾ ಹೋಗಬೇಕಾಗುತ್ತದೆ. ಮತ್ತು ಭವಿಷ್ಯದ ಜನಾಂಗವನ್ನು ನಾಡಿನ ಸಂಸ್ಕೃತಿ ಮತ್ತು ಸಮಾಜವನ್ನು ಅರ್ಥಪೂರ್ಣವಾಗಿ ರೂಪಿಸುವುದಕ್ಕೆ ಸಮರ್ಥರಾಗುವಂತೆ ಈ ಸಂಸ್ಕೃತಿ ಮತ್ತು ಶಿಕ್ಷಣದ ಕಾರ್ಯವು ನಡೆಯಬೇಕಾಗುತ್ತದೆ.

ಇಂತಹ ಸಾಂಸ್ಕೃತಿಕ ಸೂಕ್ಷ್ಮತೆಯು ಉಂಟಾಗಬೇಕಾದರೆ ಜನತೆಯಲ್ಲಿ ನೈಪುಣ್ಯ, ಜ್ಞಾನ ಮತ್ತು ಪ್ರಗತಿಪರ ತರ್ಕವನ್ನು ಗ್ರಹಿಸುವ ತೆರೆದ ಮನಸ್ಸನ್ನು ರೂಪಿಸಬೇಕಾಗುವುದು.

'ಸಶಾಚ'ವು ಜನಸಮುದಾಯದಲ್ಲಿ ಇರುವ ಅಪಾರವಾದ ಸುಪ್ತಶಕ್ತಿಯ ಬಗ್ಗೆ ವಿಶ್ವಾಸ ಉಳ್ಳದ್ದಾಗಿದೆ. ಆ ಶಕ್ತಿಯನ್ನು ಕಾರ್ಯಶೀಲಗೊಳಿಸಬಹುದು ಎಂಬ ನಂಬಿಕೆಯು ಅದಕ್ಕಿದೆ. ಯಾವುದೇ ಧರ್ಮ ವರ್ಗ ವರ್ಣಕ್ಕೆ ಸೇರಿದವರಾಗಲೀ ಜನ ಜನವೇ. ಗುಂಪುಗಾರಿಕೆಯ ದೃಷ್ಟಿಯಿಂದ ಯಾವುದೇ ವ್ಯಕ್ತಿಯನ್ನಾಗಲೀ ನಾವು ಕೀಳಾಗಿ ನೋಡುವುದಾದರೆ ಆತನ ಬಗ್ಗೆ ಪಕ್ಷಪಾತ ಬಗೆಯುವುದಾದರೆ, ಹಾಗೆ ಬಗೆಯುವವರ ಸಣ್ಣತನವನ್ನೇ ಅದು ತೋರಿಸುತ್ತದೆ. ಸದ್ಯಕ್ಕೆ ಅಸ್ತಿತ್ವದಲ್ಲಿರುವ ಸಮಾಜದ ಸ್ವರೂಪವನ್ನೂ ಅದು ಪ್ರತಿಬಿಂಬಿಸುತ್ತದೆ.

ಸೂಕ್ಷ್ಮವಾದ ಮತ್ತು ಸಮಾಜಕ್ಕೆ ಅಗತ್ಯವಾದ ಶಿಕ್ಷಣವನ್ನು ನೀಡುವುದೇ 'ಸಶಾಚ'ದ ಉದ್ದೇಶ. ಸಮಾಜದಿಂದ ದೂರವಾದ ದ್ವೀಪಗಳಂತಿರುವ ಸದ್ಯದ ಶಿಕ್ಷಣ ಸಂಸ್ಥೆಗಳನ್ನು ನಾವು ನಿರ್ಮೂಲಗೊಳಿಸಬೇಕಾಗಿದೆ. ಶಿಕ್ಷಣವನ್ನು ಹೊಸ ಬಗೆಯಲ್ಲಿ ವಿನ್ಯಾಸಗೊಳಿಸಿ ಸಮಾಜಕ್ಕೆ ಅಗತ್ಯವಾದಂತೆ ಉಪಯುಕ್ತವಾಗುವಂತೆ ಅದರ ದಿಕ್ಕಿನಲ್ಲಿ ರೂಪಿಸುವುದರಲ್ಲಿಯೇ ಈಗ ನಮ್ಮ ಎಲ್ಲ ಕನಸೂ ನಿಂತಿದೆ. ಇಡೀ ಶಿಕ್ಷಣ ಕ್ರಮವು ವಿದ್ಯಾರ್ಥಿಗೆ ಒಂದು ತೀವ್ರವಾದ ಅನುಭವವಾಗಬೇಕಾಗಿದೆ ; ಕೇವಲ ಜ್ಞಾನಸಂಪಾದನೆಯ ಮಾರ್ಗ ಮಾತ್ರವಲ್ಲ. ಶಿಕ್ಷಣವನ್ನು ಮಾನವೀಕರಣಗೊಳಿಸುವುದು ಈಗ ನಮ್ಮ ಕಾಲದ ಅಗತ್ಯವಾಗಿದೆ. ನಮ್ಮ ಜನತೆಯು ಈಗ ಸಾಮಾಜಿಕ ಎಚ್ಚರವನ್ನು ಸಮುದಾಯದ ಬೆಳವಣಿಗೆಯನ್ನು, ರೂಪಿಸುವಂತಹ ಧೋರಣೆಯನ್ನು, ರೂಢಿಸಿಕೊಂಡರೆ ಆಗ ನಮ್ಮ ರಾಷ್ಟ್ರದ ಪ್ರಗತಿ ಸಾಧ್ಯ. ಜನತೆಯು ಆರಂಭದ ಹಂತದಲ್ಲೇ ಶಿಕ್ಷಣ ಕ್ರಮದಲ್ಲಿ ಪಾಲ್ಗೊಳ್ಳುವಂತೆ ಮಾಡುವುದು ಸಶಾಚದ ಉದ್ದೇಶ. ಸಾಂಪ್ರದಾಯಿಕವಾದುದಾಗಿರಲಿ, ಆಧುನಿಕವಾದುದಾಗಿರಲಿ ಶಿಕ್ಷಣದ ಉದ್ದೇಶ ಒಬ್ಬ ವ್ಯಕ್ತಿಯ ಜೀವನೆಗೆಯನ್ನು ದೃಷ್ಟಿಯಲ್ಲಿರಿಸಿಕೊಂಡರೆ ಸಾಲದು. ಅವರ

ದೃಷ್ಟಿ ಸಾಮಾಜಿಕ, ಆರ್ಥಿಕ, ನೈತಿಕ ಮೌಲ್ಯಗಳನ್ನು ಬೆಳೆಸಿ, ಇಡೀ ಸಮಾಜವನ್ನು ಪ್ರಗತಿಯ ಹಾದಿಗೆ ಕೊಂಡೊಯ್ಯುವುದು. ಇದರಿಂದ ಇಡೀ ದೇಶದ ಸಾಮಾಜಿಕ ರಚನೆಯಲ್ಲೇ ಕ್ರಾಂತಿಕಾರಕ ಬದಲಾವಣೆಗಳು ಉಂಟಾಗುತ್ತವೆ.

ಪ್ರಸ್ತುತ ಶಿಕ್ಷಣ ವ್ಯವಸ್ಥೆಯು ನಿಸ್ಸಂಶಯವಾಗಿ ದೋಷಪೂರಿತವಾದುದು. ಕಾರಣವೇನೆಂದರೆ ನೈಪುಣ್ಯ ಮತ್ತು ಜ್ಞಾನವನ್ನು ಸಾಮಾಜಿಕ ಅಗತ್ಯಗಳಿಗೆ ಸಂಬಂಧಿಸದಂತೆ ವ್ಯಕ್ತಿಗೆ ನೀಡುವುದರಲ್ಲಿ ಅದು ತೊಡಗಿದೆ. ಮತ್ತು ಇಂತಹ ಶಿಕ್ಷಣವೂ ಕೂಡ ಸಮಾಜದ ಒಂದು ಸಣ್ಣ ಭಾಗಕ್ಕೆ ಮಾತ್ರ ಮೀಸಲಾಗಿದೆ. ಆ ವರ್ಗವು ಇಂಥ ವ್ಯವಸ್ಥೆಯಿಂದ ಮತ್ತೆ ಮತ್ತೆ ಶಕ್ತಿಯನ್ನು ಪಡೆಯುತ್ತಾ ಹೋಗುತ್ತಿದೆ. ಅದರಾಚೆಗಿನ ವಿಶಾಲವಾದ ಜನಸಮುದಾಯವನ್ನು ಈ ಶಿಕ್ಷಣವ್ಯವಸ್ಥೆ ತನ್ನ ಲೆಕ್ಕಕ್ಕೇ ತೆಗೆದುಕೊಂಡಿಲ್ಲ. ದುರ್ಬಲವರ್ಗದ ಮಕ್ಕಳು ಕೆಟ್ಟ ಶಾಲೆಗಳಿಗೆ ಹೋಗಬೇಕಾಗಿದೆ. ಅಲ್ಲಿ ಸರಿಯಾದ ಶಿಕ್ಷಣವ್ಯವಸ್ಥೆಯಿಲ್ಲ. ಮೂಳೆಗಳನ್ನು ನಾಯಿಗಳಿಗೆ ತೋರುವಂತೆ ಆ ಮಕ್ಕಳಿಗೆ ಬೇಕಾಬಿಟ್ಟಿಯಾಗಿ ಶಿಕ್ಷಣದ ಹೆಸರಿನಲ್ಲಿ ಏನನ್ನೋ ನೀಡಲಾಗುತ್ತಿದೆ. ಇಂಥ ಸಂದರ್ಭದಲ್ಲಿ ಎಲ್ಲರಿಗೂ ಪ್ರಾಥಮಿಕ ಶಿಕ್ಷಣ ಎಂಬುದು ಕೇವಲ ಆತ್ಮವಂಚನೆ. ತತ್ವ ಮತ್ತು ಆಚರಣೆಗಳ ನಡುವೆ ಇಲ್ಲಿ ದೊಡ್ಡ ಕಂದಕವೇ ಇದೆ. 'ಸಶಾಚ'ವು ಜನತೆಯ ಚಳುವಳಿ. ಜನತೆಯ ಹಕ್ಕುಬಾಧ್ಯತೆಗಳನ್ನು ಅವರಿಗೆ ತಿಳಿಸಿಕೊಡುವುದು ಇದರ ಉದ್ದೇಶ. ಇದರಿಂದಾಗಿ ರಾಷ್ಟ್ರೀಯ ಸಂಪತ್ತಿನಲ್ಲಿ ತಮ್ಮ ಪಾಲನ್ನು ಅವರು ಆತ್ಮಸ್ಥೈರ್ಯದಿಂದ ಕೇಳಿ ಪಡೆಯಲು ಸಮರ್ಥರಾಗುತ್ತಾರೆ. ಸಾಮಾಜಿಕ ಸಂಸ್ಥೆಗಳಲ್ಲಿ ಸಕ್ರಿಯವಾಗಿ ಮತ್ತು ಜವಾಬ್ದಾರಿಯುತವಾಗಿ ಪಾಲ್ಗೊಳ್ಳುವುದನ್ನು ಅವರು ಕಲಿಯುತ್ತಾರೆ. ಆದುದರಿಂದ ಈಗ ಆಗಬೇಕಾದ್ದು ತೇಪೆ ಕೆಲಸವಲ್ಲ ; ಆಮೂಲಾಗ್ರವಾದ ಬದಲಾವಣೆ. ಇದರಿಂದ ಇಡೀ ಸಮುದಾಯವು ಶಿಕ್ಷಣ ಕಾರ್ಯಕ್ರಮದಲ್ಲಿ ಅರ್ಥಪೂರ್ಣವಾಗಿ ಪಾಲ್ಗೊಳ್ಳುವುದು ಸಾಧ್ಯವಾಗುತ್ತದೆ. ಅದಕ್ಕಾಗಿಯೇ ಹಿಂದೆ ಹೇಳಿದ್ದು ; 'ಸಶಾಚವು' ಒಂದು ಜನತಾ ಚಳುವಳಿ. ಯಾರೋ ಒಬ್ಬಿಬ್ಬರು ಕಲ್ಪಿಸಿರುವ ತತ್ವ ಅಥವಾ ಕಾರ್ಯಯೋಜನೆಯಲ್ಲ.

ಮೇಲೆ ಹೇಳಿದಂತೆ ನಮ್ಮ ಚಳುವಳಿಯ ಕೇಂದ್ರ ಜನಸಮುದಾಯ ; ಅದರಲ್ಲೂ ದುರ್ಬಲವರ್ಗ. ಈ ಚಳುವಳಿಯಲ್ಲಿ ಅವರ ಪಾಲ್ಗೊಳ್ಳುವಿಕೆಗೆ ನಾವು ವಿಶೇಷ ಗಮನವನ್ನು ನೀಡಬೇಕಾಗಿದೆ. ಅವರು ಒಗ್ಗಟ್ಟಾಗಿ ಹೊಸಮೌಲ್ಯಗಳನ್ನು ಪ್ರಗತಿಶೀಲ ಮನೋಭಾವವನ್ನು ರೂಢಿಸಿಕೊಂಡು ಹೊಸ ಬದುಕಿನ ಕ್ರಮಗಳನ್ನು ಕಂಡುಕೊಳ್ಳಬೇಕಾಗಿದೆ. ನಮ್ಮ ಕಾರ್ಯಕರ್ತರ ಗುರಿ ಇಂಥ ಜನಸಮುದಾಯದ ಸುಪ್ತ ಶಕ್ತಿಯನ್ನು ಅನಾವರಣಗೊಳಿಸುವತ್ತ ಕೇಂದ್ರೀಕೃತವಾಗಬೇಕಾಗಿದೆ.

ಒಟ್ಟು ಜನಸಂಖ್ಯೆಯಲ್ಲಿ ಶೇ. 70ರಷ್ಟಿರುವ ದುರ್ಬಲವರ್ಗವು ಸರ್ಕಾರ ತಮ್ಮ ಜೀವನ ಸುಧಾರಣೆಗಾಗಿ ರೂಪಿಸುವ ಕಾರ್ಯಕ್ರಮಗಳ, ಸ್ಥಾಪಿಸುವ ಸಂಸ್ಥೆಗಳ

ಸರಿಯಾದ ಉಪಯೋಗವನ್ನು ಪಡೆದುಕೊಳ್ಳಬೇಕಾಗಿದೆ. ಮಾತ್ರವಲ್ಲ, ಆ ಜವಾಬ್ದಾರಿಯನ್ನು ತಾವೇ ವಹಿಸಿಕೊಳ್ಳಬೇಕಾಗಿದೆ. 'ಸಶಾಚ' ಚಳುವಳಿಯಲ್ಲಿ ಜನಸಮುದಾಯವೇ ನೇರವಾಗಿ ಪಾಲ್ಗೊಳ್ಳುತ್ತದೆ. ತಮ್ಮ ಮಕ್ಕಳ ಶಿಕ್ಷಣ ಉತ್ತಮಗೊಳ್ಳಲು ಅಧ್ಯಾಪಕರ ಜೊತೆ, ಶಿಕ್ಷಣ ಸಂಸ್ಥೆಯ ಅಧಿಕಾರಿಗಳ ಜೊತೆ, ಶಿಕ್ಷಣ ಇಲಾಖೆಯ ಜೊತೆ ಅವರು ಉತ್ತಮ ಸಂಬಂಧ ಇರಿಸಿಕೊಂಡು ಸೂಕ್ತ ಬದಲಾವಣೆಯನ್ನು ತರಲು ಪ್ರಯತ್ನಿಸುತ್ತಾರೆ. ಸಾಂಪ್ರದಾಯಿಕ ಶಾಲೆಗಳಿಗಿಂತ, ಈಗ ಅಸ್ತಿತ್ವದಲ್ಲಿರುವ ಸಮೂಹ ಶಿಕ್ಷಣಕ್ಕಿಂತ 'ಸಶಾಚ' ಭಿನ್ನವಾಗುವುದು ಇಲ್ಲಿಯೇ.

ಜನಸಮುದಾಯ ಶಿಕ್ಷಣ ಸಂಸ್ಥೆಯಲ್ಲಿ ನೇರವಾಗಿ ಪಾಲ್ಗೊಳ್ಳುವುದು ಆರಂಭದ ಹಂತ. ಕ್ರಮೇಣ ಸಮಾಜದ ಎಲ್ಲ ಸಾರ್ವಜನಿಕ ಸಂಸ್ಥೆಗಳಲ್ಲಿಯೂ–ಉದಾಹರಣೆಗೆ ಐಆರ್‌ಡಿಪಿ, ಆರೋಗ್ಯ ಇಲಾಖೆ ಇತ್ಯಾದಿ—ಇವರು ಸಕ್ರಿಯವಾಗಿ ಪಾಲ್ಗೊಳ್ಳಬೇಕೆಂಬುದು 'ಸಶಾಚದ'ದ ಗುರಿ. ಈ ಸಂಸ್ಥೆಗಳು ತಮ್ಮ ಉದ್ದೇಶಕ್ಕನುಗುಣವಾಗಿ ಕೆಲಸ ಮಾಡಬೇಕು ಮತ್ತು ಸೇವೆಯ ಗುಣಮಟ್ಟವನ್ನು ಉತ್ತಮಪಡಿಸಿಕೊಳ್ಳಬೇಕು. ಹಾಗೆ ಮಾಡುವುದು ಜನಜಾಗೃತಿಯಿಂದ ಮಾತ್ರ ಸಾಧ್ಯ. ಸರ್ಕಾರವಾಗಲೀ, ಸಾರ್ವಜನಿಕ ಸಂಸ್ಥೆಗಳಾಗಲೀ ಜನಹಿತಕ್ಕೆ ಬದ್ಧವಾಗಿರಬೇಕು. ಸರ್ಕಾರ ಇಂಥ ಜವಾಬ್ದಾರಿಯನ್ನು ವಹಿಸಿಕೊಂಡರೂ ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸುವಲ್ಲಿ ಅದು ಸಫಲವಾಗಿಲ್ಲ. ಸಮಾಜದಲ್ಲಿ ರೂಢಿಗತವಾಗಿರುವ ದೋಷಗಳನ್ನು, ಬದಲಾವಣೆಗೆ ಅಡ್ಡಿಯಾಗಿರುವ ಶಕ್ತಿಗಳನ್ನೂ ಮೀರಿ ಕೆಲಸ ಮಾಡಲು 'ಸಶಾಚ' ಶ್ರಮಿಸುತ್ತದೆ. ಜನತೆಯಲ್ಲಿರುವ ವಿವಿಧ ರೀತಿಯ ಶಕ್ತಿ ಸಾಮರ್ಥ್ಯಗಳನ್ನು ಬೆಳಕಿಗೆ ತಂದು ಅವರ ಜೀವನ ಹಸನು ಮಾಡಲು ಪ್ರಯತ್ನ ಪಡುತ್ತದೆ.

## 'ಸಶಾಚ'ದ ಗುರಿಗಳು

1. ಎಲ್ಲರಿಗೂ ಪ್ರಾಥಮಿಕ ಶಿಕ್ಷಣ ದೊರಕಬೇಕು. ಅದರಲ್ಲೂ ವಿಶೇಷವಾಗಿ ದುರ್ಬಲ ವರ್ಗದವರಿಗೆ ಶಿಕ್ಷಣ ದೊರಕಲೇಬೇಕು ಎಂಬುದರ ಬಗ್ಗೆ ಒತ್ತುಕೊಟ್ಟು ಸಮಗ್ರ ನೀತಿಯೊಂದನ್ನು ರೂಪಿಸುವುದು.

2. ಸಾರ್ವಜನಿಕ ಪ್ರಾಥಮಿಕ ಶಿಕ್ಷಣ ಸಂಸ್ಥೆಗಳನ್ನು ಅಧಿಕಾರ ವಿಕೇಂದ್ರೀಕರಣ ಪದ್ಧತಿ ಹಾಗೂ ಜನಸಮುದಾಯದ ಪಾಲ್ಗೊಳ್ಳುವಿಕೆ–ಇವುಗಳ ಆಧಾರದ ಮೇಲೆ ರೂಪಿಸುವುದು.

3. ಜಾತಿ, ಧರ್ಮ, ವರ್ಗ, ವರ್ಣ. ಲಿಂಗ–ಈ ಯಾವುದೇ ಭೇದವೂ ಮುಖ್ಯವಾಗದೆ ವ್ಯಕ್ತಿಯನ್ನು ವ್ಯಕ್ತಿಯಾಗಿಯೇ ಗುರುತಿಸಿ ಗೌರವಿಸುವ ಸಮಾಜ ನಿರ್ಮಾಣದತ್ತ ಈ ಚಳುವಳಿಯನ್ನು ಕೊಂಡೊಯ್ಯುವುದು.

4. ರೂಢಿಗತ ಜಡ ನಂಬಿಕೆಗಳನ್ನು ಹೋಗಲಾಡಿಸಿ ಹೊಸ ಆಲೋಚನೆಗಳನ್ನು ಜನತೆಯಲ್ಲಿ ಬೆಳೆಸುವುದು, ಸಾಂಸ್ಕೃತಿಕ ಬದಲಾವಣೆಯ ಮೂಲಕ ಸಾಮಾಜಿಕ ಬದಲಾವಣೆಗೆ ಪ್ರಯತ್ನಿಸುವುದು, ಒಟ್ಟಾರೆ ಸಮಾಜವನ್ನೇ ಆಮೂಲಾಗ್ರವಾಗಿ ಬದಲಾಯಿಸುವುದು–ಇದರ ಗುರಿ.

5. ಸರ್ಕಾರದ ನೀತಿಗಳಲ್ಲಿ ಅಗತ್ಯವಾದ ಬದಲಾವಣೆಗಳನ್ನು ತರಲು ಪ್ರಯತ್ನಿಸುವುದೂ ಕೂಡ ಇದರ ಗುರಿಗಳಲ್ಲಿ ಒಂದು.

**'ಸಶಾಚ'ದ ಉದ್ದೇಶಗಳು**

1. ಆಯ್ದ ಗ್ರಾಮೀಣ ಪ್ರದೇಶಗಳಲ್ಲಿ 6 ರಿಂದ 14ರ ವಯಸ್ಸಿನ ಗುಂಪಿನ ಮಕ್ಕಳಿಗೆ ಸಾರ್ವತ್ರಿಕವಾಗಿ ಪ್ರಾಥಮಿಕ ಶಿಕ್ಷಣವನ್ನು ನೀಡಲು ನಿರಂತರವಾಗಿ ಶ್ರಮಿಸುವುದು.

2. ಆಯ್ದ ಗ್ರಾಮೀಣ ಪ್ರದೇಶಗಳಲ್ಲಿ ಪ್ರಾಥಮಿಕ ಶಾಲೆಗಳ ಗುಣ ಮಟ್ಟವನ್ನು ಸುಧಾರಿಸುವುದು ; ಶಿಕ್ಷಣವನ್ನು ಜೀವನಕ್ಕೆ ಸಂಗತವಾಗುವಂತೆ ರೂಪಿಸುವುದು.

3. ಆಧುನಿಕ ಶಿಕ್ಷಣ ವಿಧಾನಗಳನ್ನು ಹಾಗೂ ಶಿಕ್ಷಣ ಸಹಾಯಕ ಸಾಮಗ್ರಿಗಳನ್ನು ಪ್ರಾಥಮಿಕ ಶಾಲೆಗಳಿಗೆ ಒದಗಿಸಿಕೊಡುವುದು.

4. ಅಧ್ಯಾಪಕರಿಗೆ ಇಂಥ ಶಿಕ್ಷಣ ವಿಧಾನದಲ್ಲಿ ಸಕ್ರಿಯವಾಗಿ ತೊಡಗಲು ಸಾಧ್ಯವಾಗುವಂತೆ ಅಗತ್ಯ ಒಳನೋಟಗಳನ್ನು ಒದಗಿಸಿಕೊಡುವುದು. ಅಗತ್ಯವಿದ್ದ ಕಡೆ ಅಧ್ಯಾಪಕರ ಗುಣಮಟ್ಟವನ್ನು ಸುಧಾರಿಸಲು ಪ್ರಯತ್ನಿಸುವುದು.

5. ದುರ್ಬಲ ವರ್ಗವು ಶಿಕ್ಷಣ ಸಂಸ್ಥೆಗಳೊಡನೆ ನಿಕಟ ಸಂಪರ್ಕವಿರಿಸಿಕೊಳ್ಳುವುದರ ಮೂಲಕ ತಮಗೆ ಸೇವೆ ಸಲ್ಲಿಸುತ್ತಿರುವ ಸಂಸ್ಥೆಗಳು ಸರಿಯಾದ ಕ್ರಮದಲ್ಲಿ ಕಾರ್ಯನಿರ್ವಹಿಸುವಂತೆ ನೋಡಿಕೊಳ್ಳುವುದು. ಅಂದರೆ ಅವುಗಳ ಮೇಲೆ ಸೂಕ್ತ ಹತೋಟಿ ಪಡೆದುಕೊಳ್ಳುವುದು.

6. ದುರ್ಬಲ ವರ್ಗದಲ್ಲಿ ಅವರ ಸ್ವಸಾಮರ್ಥ್ಯದ ಬಗ್ಗೆ ಅರಿವು ಮೂಡಿಸಿ ಈಗ ಕೇಂದ್ರೀಕೃತವಾಗಿರುವ ಅಧಿಕಾರ ಎಲ್ಲರಿಗೂ ಸಮಾನವಾಗಿ ದೊರೆಯುವಂತೆ ಮಾಡುವುದು ; ದುರ್ಬಲ ಜನದ ಆಕ್ರಂದನ ಶಕ್ತಿಪೂರ್ಣ ಪ್ರತಿಭಟನೆಯಾಗಿ ರೂಪುಗೊಳ್ಳಲು ನೆರವಾಗುವುದು ; ಅವರು ರಾಷ್ಟ್ರಜೀವನದ ಪ್ರಮುಖ ಘಟನೆಗಳಲ್ಲಿ, ನಿರ್ಧಾರಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವುದು.

7. ಹೊಸಬಗೆಯ ಶಿಕ್ಷಣದ ಮೂಲಕ ದುರ್ಬಲ ವರ್ಗ ಸಂಘಟಿತವಾಗುವಂತೆ ಮಾಡಿ, ಅವರ ಅಭಿಲಾಷೆಗಳನ್ನು ಒಗ್ಗಟ್ಟಾಗಿ ಸಾಧಿಸಿಕೊಳ್ಳುವಂತೆ ಮಾಡುವುದು.

8. ಗ್ರಾಮೀಣ ಪ್ರದೇಶಗಳಲ್ಲಿ ಪ್ರಗತಿಗೆ ಅಡ್ಡಿಯಾಗಿರುವ ಕೆಲವು ನಂಬಿಕೆ

ಗಳನ್ನು ನಿರ್ಮೂಲನ ಮಾಡಿ, ಅವರ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗೆ ನೆರವಾಗುವುದು.

9. ಜನತೆಯಲ್ಲಿರುವ ಸೃಜನಶೀಲ ಶಕ್ತಿಯನ್ನು, ವಿಶ್ಲೇಷಣಾ ಸಾಮರ್ಥ್ಯವನ್ನು ವಿಕಾಸಗೊಳಿಸಿ ತಮ್ಮ ಸಮಸ್ಯೆಗಳಿಗೆ ತಾವೇ ಪರಿಹಾರ ಕಂಡುಕೊಳ್ಳುವ ಶಕ್ತಿಯನ್ನು ಅವರಲ್ಲಿ ಉದ್ದೀಪನಗೊಳಿಸುವುದು.

**ಕಾರ್ಯವಿಧಾನ**

**ಸ್ಥಳ :** ಸುಮಾರು ಏಳು ಅಥವಾ ಎಂಟು ಕಿ.ಮೀ. ಸುತ್ತಳತೆಯಲ್ಲಿರುವ ಹಳ್ಳಿಗಳ ಗುಂಪು ಈ ಚಳುವಳಿಯ ಕ್ಷೇತ್ರ. ಈಗಾಗಲೇ ಕಾರ್ಯಪ್ರವೃತ್ತವಾಗಿರುವ ಸ್ವಯಂಸೇವಾ ಸಂಸ್ಥೆಗಳ ಜೊತೆಗೂಡಿ ವ್ಯಕ್ತಿ–ವ್ಯಕ್ತಿಗಳ ನಡುವೆ, ಹಳ್ಳಿಹಳ್ಳಿಗಳ ನಡುವೆ ಅರ್ಥಪೂರ್ಣ ಸಂವಾದದ ಮೂಲಕ ಅವರಲ್ಲಿ ಅರಿವು ಮೂಡಿಸಿ, ದುರ್ಬಲ ವರ್ಗದ ಬದುಕಿನ ಸುಧಾರಣೆಗೆ ಪ್ರಯತ್ನಿಸುವುದು ನಮ್ಮ ಉದ್ದೇಶ.




ಚಿತ್ರ : ಹನ್ನೆರಡು ಹಳ್ಳಿಗಳ ಒಂದು ಸಮೂಹ

ದುರ್ಬಲವರ್ಗದ ಏಳಿಗೆಗಾಗಿ ಯಾವ ರೀತಿಯ ಪ್ರಯತ್ನಗಳೂ ನಡೆಯದ ಹಳ್ಳಿಗಳಲ್ಲಿ 'ಸಶಾಚ' ಚಳುವಳಿಯನ್ನು ನಾವು ಆರಂಭಿಸಬೇಕಾದಾಗ ನಮ್ಮ ಕಾರ್ಯಕರ್ತರ ಗುಂಪು ಅಲ್ಲಿಯೇ ನೆಲೆಸುತ್ತದೆ. ಅಲ್ಲಿಯ ಜನರೊಂದಿಗೆ ಒಡನಾಟ ಬೆಳೆಸಿ,

ಅವರಿಗೆ ಹತ್ತಿರವಾಗಿ ಅವರೊಡನೆ ಸ್ನೇಹಪೂರ್ಣ ಸಂಬಂಧ ಸ್ಥಾಪಿಸಿಕೊಂಡು ಅವರನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಲಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಅಲ್ಲಿನ ಸಾಮಾಜಿಕ ದೋಷಗಳನ್ನು ಗುರ್ತಿಸಿ, ತೀರಾ ಅಗತ್ಯವೆನ್ನಿಸಿದಲ್ಲಿ ಮಾತ್ರ ಅಲ್ಲಿ 'ಸಶಾಚ' ಚಳುವಳಿಯನ್ನು ಆರಂಭಿಸುತ್ತೇವೆ.

'ಸಶಾಚ'ದ ಮುಖ್ಯ ಸೂತ್ರವೇ 'ಬಾಂಧವ್ಯ'. ನಾವೆಲ್ಲ ಒಂದೇ–ಎಂಬ ಭಾವನೆಯನ್ನು ಆರಂಭದ ಹಂತದಲ್ಲಿಯೇ ಮೂಡಿಸಲು ನಮ್ಮ ಕಾರ್ಯಕರ್ತರ ಗುಂಪು ಶ್ರಮಿಸುತ್ತದೆ. ಅಲ್ಲಿಯ ಜನರೊಡನೆ ಉತ್ತಮ ಬಾಂಧವ್ಯ ರೂಢಿಸಿಕೊಳ್ಳಲು ಪ್ರಯತ್ನಿಸುತ್ತದೆ. ಜನತೆ ಎಲ್ಲದಕ್ಕೂ ಕಾರ್ಯಕರ್ತರನ್ನು ಅವಲಂಬಿಸುವ ಪದ್ಧತಿಯನ್ನು ಹೋಗಲಾಡಿಸಿ, ತನ್ನ ಸ್ವಶಕ್ತಿಯಿಂದಲೇ ಪರಿಹಾರ ಕಂಡುಕೊಳ್ಳುವಂತೆ ಅವರಲ್ಲಿ ಆತ್ಮ ವಿಶ್ವಾಸ ಮೂಡಿಸುವ ರೀತಿಯ ಕಾರ್ಯವಿಧಾನಗಳನ್ನು ನಾವು ರೂಪಿಸುತ್ತೇವೆ. ಇದರಲ್ಲಿ ಮುಖ್ಯವಾಗಿ ಸ್ಥಳೀಯ ಅನುಕೂಲಗಳನ್ನು ಅಲ್ಲಿಯ ಸೌಲಭ್ಯಗಳನ್ನು ಚಳುವಳಿಗೆ ಪೂರಕವಾಗುವಂತೆ ಬಳಸಿಕೊಳ್ಳಲಾಗುತ್ತದೆ.

ಸಂಘಟನೆಯ ಉದ್ದೇಶ ಪ್ರಸ್ತುತ ಅಸ್ತಿತ್ವದಲ್ಲಿರುವ ಮೌಲ್ಯಗಳನ್ನು ಬದಲಾವಣೆಗೆ ಗುರಿಪಡಿಸುವುದು ಮಾತ್ರವಲ್ಲ, ಹೊಸ ಮೌಲ್ಯಗಳನ್ನು ದುರ್ಬಲವರ್ಗಕ್ಕೆ ಸೃಷ್ಟಿಸಿಕೊಡುವುದೂ ಆಗಿದೆ. ಏಕೆಂದರೆ ಅಸ್ತಿತ್ವದಲ್ಲಿರುವ ಮೌಲ್ಯವ್ಯವಸ್ಥೆಯೂ ಸಬಲವರ್ಗಗಳಿಗೆ ಮಾತ್ರ ಪೂರಕವಾಗಿದೆ. ಹೊಸ ಮೌಲ್ಯಗಳ ಸೃಷ್ಟಿಯಿಂದ ಕಾರ್ಯ ರೂಪಕ್ಕೆ ಬರುವ ಬದಲಾವಣೆಗಳು ಜೀವನದಲ್ಲಿಯೂ ಕಾಣಿಸಿಕೊಂಡು ಸೂಕ್ತ ಸಾಮಾಜಿಕ ಕ್ರಿಯೆಗೆ ಸಮುದಾಯವನ್ನು ಪೋಷಿಸುವಂತೆ 'ಸಶಾಚ'ವು ಕಾರ್ಯಪ್ರವೃತ್ತವಾಗುತ್ತದೆ.

### ಪಾಲ್ಗೊಳ್ಳುವಿಕೆ

ಹೆಚ್ಚು ಸವಲತ್ತುಗಳನ್ನು ಪಡೆಯದ ವರ್ಗಕ್ಕೆ, ಅವರ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳಲು, ಅವರ ಸಾಮರ್ಥ್ಯ ಹಾಗೂ ದೌರ್ಬಲ್ಯಗಳನ್ನು ಗುರ್ತಿಸಿಕೊಳ್ಳಲು ಶಿಕ್ಷಣ ನೆರವಾಗಬೇಕು. ನಿರ್ಣಯ ಕೈಗೊಳ್ಳುವ ಅವರ ಸಾಮರ್ಥ್ಯವನ್ನು ಬಲಪಡಿಸಲು, ತಮಗಾಗುತ್ತಿರುವ ಅನ್ಯಾಯದ ಅರಿವು ಮೂಡಿ, ಅದನ್ನು ಎದುರಿಸಲು ಹೋರಾಟ ಮಾಡುವ ಜಾಗೃತಿ ಮೂಡಲು ಈ ಶಿಕ್ಷಣ ಜನತೆಗೆ ನೆರವಾಗಬೇಕು. ತಮ್ಮಲ್ಲೆ ಇರುವ ಅಸಾಮಾನ್ಯ ಸುಪ್ತಶಕ್ತಿಯ ಅರಿವು ಹಾಗೂ ಸುತ್ತಮುತ್ತಲಿನ ಸಂಪನ್ಮೂಲಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳುವ ಜಾಣ್ಮೆ–ಅವರಲ್ಲಿ ಮೂಡಬೇಕು. ಇದು ಹೊಸ ಜನಾಂಗವೊಂದರ ನಿರ್ಮಾಣಕ್ಕೆ ಹಾದಿ ಮಾಡಿಕೊಡುತ್ತದೆ.

### ಕಲಿಕೆಗಾಗಿ ಕಲಿಕೆ

ಆತ್ಮಗೌರವ ಹಾಗೂ ಆತ್ಮವಿಶ್ವಾಸವನ್ನು ಜನತೆಯಲ್ಲಿ ಮೂಡಿಸುವ ಮೂಲಕ

ಅವರಲ್ಲಿ ಹೊಸ ವ್ಯಕ್ತಿತ್ವ ರೂಪುಗೊಳ್ಳಲು ಅವಕಾಶ ಮಾಡಿ ಕೊಡಬೇಕು. ಇದು ಅವರಲ್ಲಿ ಉನ್ನತ ಆಕಾಂಕ್ಷೆಗಳನ್ನು, ಅದನ್ನು ಸಾಧಿಸುವ ಬಲವನ್ನು ನೀಡುತ್ತದೆ. ಪರಸ್ಪರ ಒಬ್ಬರಲ್ಲಿ ಮತ್ತೊಬ್ಬರಿಗೆ ಗೌರವ, ಅಭಿಪ್ರಾಯವನ್ನು ಮುಕ್ತವಾಗಿ ವ್ಯಕ್ತ ಪಡಿಸುವ ಸ್ವಾತಂತ್ರ್ಯ, ಸಹಜವಾಗಿ ಎಲ್ಲರೊಡನೆ ಪಾಲ್ಗೊಳ್ಳುವ, ಬೆರೆಯುವ ಮನೋ ಭಾವ–ಇಂಥ ವಾತಾವರಣ ನಿರ್ಮಾಣ ಕಲಿಯುವಿಕೆಗೆ ತೀರಾ ಅಗತ್ಯ. ಇಂಥ ವಾತಾವರಣ ಮಕ್ಕಳಾಗಲೀ, ವಯಸ್ಕರಾಗಲೀ ತಮ್ಮ ವ್ಯಕ್ತಿತ್ವವನ್ನು ಪ್ರಬುದ್ಧವಾಗಿ ಬೆಳೆಸಿಕೊಳ್ಳಲು ಅವಕಾಶ ಕಲ್ಪಿಸಿಕೊಡುತ್ತದೆ. ತನ್ಮೂಲಕ ಇಡೀ ಸಮಾಜ ಅರ್ಥಪೂರ್ಣ ಬದಲಾವಣೆ ಯತ್ತ ಹೊರಳುತ್ತದೆ.

ಇಂತಹ ವಾತಾವರಣದಲ್ಲಿ ಜನ ತಮ್ಮ ಕಲಿಕೆಯ ಸ್ಪಷ್ಟ ಗುರಿಯನ್ನು ಕಂಡು ಕೊಳ್ಳುತ್ತಾರೆ. ಅವರ ಕಲಿಕೆಯ ಉದ್ದೇಶ ಉನ್ನತ ಮಟ್ಟದ್ದಾಗುತ್ತದೆ. ಸ್ವಾರ್ಥ ರಹಿತರಾಗಿ, ಸಮಾಜಕ್ಕಾಗಿ, ಸಮಾಜಕಲ್ಯಾಣಕ್ಕಾಗಿ ದುಡಿಯಬೇಕೆನ್ನುವ ಆಸಕ್ತಿಯನ್ನು ಎಲ್ಲರಲ್ಲೂ ಸಮಾನವಾಗಿ ಬೆಳೆಸಲು ಇದು ನೆರವಾಗುತ್ತದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ತಮ್ಮ ಕಲಿಕೆ ಹಾಗೂ ನೈಪುಣ್ಯಗಳನ್ನು ಉತ್ತಮಪಡಿಸಿಕೊಳ್ಳಲು, ಅವರು ಆ ಕ್ಷೇತ್ರದ ನಿಪುಣರನ್ನು, ಪ್ರತಿಭಾವಂತರನ್ನು ಭೇಟಿಮಾಡಿ ಅವರ ಮೂಲಕ ತಮ್ಮ ಸಾಮರ್ಥ್ಯವನ್ನು ಬೆಳೆಸಿಕೊಳ್ಳುವ ಆಸಕ್ತಿಯನ್ನು ದುರ್ಬಲ ಜನಾಂಗದಲ್ಲಿ ನಾವು ಮೂಡಿಸಬೇಕು. ಯಾವುದು ಸರಿ, ಯಾವುದು ತಪ್ಪು, ಯಾವ ಕೆಲಸವನ್ನು ಯಾವಾಗ ಮಾಡಬೇಕು ಎಂಬ ವಿವೇಚನೆಯನ್ನು ಅವರಲ್ಲಿ ನಾವು ಬೆಳೆಸಬೇಕು. ಆಗ ಅವರು ತಮ್ಮ ಕಾರ್ಯಚಟುವಟಿಕೆಗಳ ಬಗ್ಗೆ ಸ್ಪಷ್ಟ ಕಲ್ಪನೆ ಬೆಳೆಸಿಕೊಂಡು ಮುಕ್ತ ಮನಸ್ಸಿನಿಂದ ಕ್ರಿಯಾಶೀಲರಾಗುತ್ತಾರೆ.

ಜನರಲ್ಲಿರುವ ಶಕ್ತಿಸಾಮರ್ಥ್ಯಗಳನ್ನು ಬಳಸಿಕೊಂಡು, ಅವರ ಅಗತ್ಯಕ್ಕನುಗುಣ ವಾದ ಶಿಕ್ಷಣದತ್ತ ನಾವು ನಮ್ಮ ಗಮನವನ್ನು ಕೇಂದ್ರೀಕರಿಸಬೇಕು. ಅವಕಾಶಗಳಿ ಗಾಗಿ ಕಾಯುವ ಬದಲು ಅಂತಹ ಅವಕಾಶಗಳು ಆ ಸಮಾಜದಲ್ಲಿಯೇ ನಿರ್ಮಾಣವಾಗುವಂತೆ ನಾವು ನೋಡಿಕೊಳ್ಳಬೇಕು. ನಿದರ್ಶನಗಳ ಮೂಲಕ, ಮಾದರಿ ಪ್ರಯೋಗಗಳ ಮೂಲಕ ಜನತೆ ತಮಗೆ ಅಗತ್ಯವಾದ, ಸರಿಹೊಂದುವಂತಹ ನೈಪುಣ್ಯ ಬೆಳೆಸಿಕೊಳ್ಳಲು, ತಮ್ಮಲ್ಲಿರುವ ಸಾಮರ್ಥ್ಯವನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳಲು ನಾವು ನೆರವಾಗಬೇಕು.

## ಜನಸಂಘಟನೆಯನ್ನು ಬಲಪಡಿಸುವುದು

ಈ ಮೊದಲೇ ತಿಳಿಸಿದಂತೆ 'ಸಶಾಚ'ದ ಗುರಿ ಜನಸಂಘಟನೆಯನ್ನು ಬಲಪಡಿಸು ವುದು. ಜನರು ಮುಕ್ತವಾಗಿ ಹಾಗೂ ಸ್ವತಂತ್ರವಾಗಿ ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳಲು ನೆರವಾಗುವುದು ನಮ್ಮ ಮುಖ್ಯ ಉದ್ದೇಶ. ಇದರಿಂದಾಗಿ ಜನರು

ತಮ್ಮ ಕೆಲಸಗಳಿಗೆ ಸ್ವಯಂ ಸೇವಾ ಸಂಸ್ಥೆಗಳನ್ನು ಅವಲಂಬಿಸುವುದು ಕಡಿಮೆಯಾಗುತ್ತದೆ ಮಾತ್ರವಲ್ಲ, ಅವರ ಸ್ವಸಾಮರ್ಥ್ಯ ಶಕ್ತಿ ಬಲಗೊಳ್ಳುತ್ತದೆ.

**ಇದೊಂದು ನಿರಂತರ ಪ್ರಕ್ರಿಯೆ :**

'ಸಶಾಚದ' ಪರಿಣಾಮವನ್ನು ನಾವು ಚಳುವಳಿಗೆ ಆಯ್ದುಕೊಂಡ ಹಳ್ಳಿಗಳಿಂದ ಸುತ್ತಮುತ್ತಲ ಹಳ್ಳಿಗಳಿಗೂ ಆದರ ಪ್ರಭಾವ ಹಬ್ಬುವ ರೀತಿಯಲ್ಲಿ ನಾವು ಕಾಣಬಹುದು. ಹೀಗೆಯೇ ಇದು ಸರಪಳಿಯಂತೆ ಮುಂದುವರೆಯುವ ನಿರಂತರ ಕ್ರಿಯೆಯಾಗಿದೆ.

**ಮೌಲ್ಯಮಾಪನ :**

'ಸಶಾಚ'ದ ನಿರ್ದಿಷ್ಟ ಗುರಿಗಳನ್ನು ಯಾವ ಪ್ರಮಾಣದಲ್ಲಿ ನಮ್ಮ ಪ್ರಯೋಗವು ಸಾಧಿಸಿದೆ ಎಂಬುದರ ತೀರ್ಮಾನದ ಮೇಲೆ ಈ ಪ್ರಯೋಗದ ಮೌಲ್ಯಮಾಪನವು ನಿಂತಿದೆ. ಅಂದರೆ ಇಂತಹ ತೀರ್ಮಾನವು ನಾವು ತೆಗೆದುಕೊಂಡ ಕಾರ್ಯಕ್ರಮ ಮತ್ತು ಕಾಲಮಿತಿಗೆ ಬದ್ಧವಾದದ್ದು. ಮತ್ತು ಈ ಕಾರ್ಯಕ್ರಮದ ಗುಣಮಟ್ಟ ಹಾಗೂ ವಿಸ್ತಾರವನ್ನು ಇದು ಲಕ್ಷಿಸುತ್ತದೆ.

ಇಂತಹ ಮೌಲ್ಯಮಾಪನಕ್ಕೆ ಸಹಾಯಕ ಸಾಮಗ್ರಿಯಾಗಿ ಒಂದು ಲಿಖಿತ ದಾಖಲೆಯನ್ನು ನಾವು ಇಟ್ಟುಕೊಳ್ಳಬೇಕಾಗುತ್ತದೆ. ಈ ದಾಖಲೆಯಲ್ಲಿ ಶೈಕ್ಷಣಿಕ, ಆರೋಗ್ಯ, ಸಾಂಸ್ಕೃತಿಕ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ನಮ್ಮ ಕಾರ್ಯಕ್ಷೇತ್ರವನ್ನು ಲಕ್ಷಿಸಿ ದಾಖಲಿಸಲಾಗುತ್ತದೆ. ಸಾಧ್ಯವಾದಲ್ಲಿ ಕಾರ್ಯಕ್ರಮಕ್ಕೆ ಮೊದಲಿದ್ದ ಸ್ಥಿತಿಯನ್ನು ಚಲನಚಿತ್ರ ಮತ್ತು ಛಾಯಾಚಿತ್ರಗಳ ಸಹಾಯದಿಂದ ದಾಖಲಿಸಿ ಇಟ್ಟುಕೊಳ್ಳಲಾಗುತ್ತದೆ.

ಇಂತಹ ಮೌಲ್ಯಮಾಪನವೂ ಕೂಡ ವರ್ಷದ ಯಾವುದೋ ಒಂದು ಹಂತದಲ್ಲಿ ಮಾಡಿ ಮುಗಿಸುವಂಥದಲ್ಲ. ಉದ್ದಕ್ಕೂ ನಿರಂತರವಾಗಿ ನಡೆಯಬೇಕಾದುದು. ಆದುದರಿಂದ ಲಿಖಿತ ದಾಖಲಾತಿ ಗ್ರಂಥವನ್ನು ನಾವು ಉದ್ದಕ್ಕೂ ಎಚ್ಚರದಿಂದ ತುಂಬುತ್ತಾ ಹೋಗಬೇಕಾಗುತ್ತದೆ. ಸ್ವಯಂ ಸೇವಕರು ನಡೆಸಿದ ಕ್ಷೇತ್ರಾಭ್ಯಾಸದ ದಾಖಲೆಗಳು ಮತ್ತು ಈ ಯೋಜನೆಗೆ ಒಳಪಟ್ಟ ಜನರೊಂದಿಗೆ ನಡೆಸಿದ ಚರ್ಚೆಗಳ ದಾಖಲೆಗಳು ಮೌಲ್ಯ ಮಾಪನ ಕಾಲದಲ್ಲಿ ಮುಖ್ಯವಾದ ಮಾಹಿತಿಗಳಾಗಿ ಒದಗುತ್ತವೆ. ಕ್ಷೇತ್ರದ ಟಿಪ್ಪಣಿಗಳು ಸಂಗ್ರಹಿತವಾಗಿ ಹೋದಂತೆಲ್ಲಾ ಮೌಲ್ಯಮಾಪನವನ್ನು ಹೆಚ್ಚು ವಸ್ತುನಿಷ್ಠವಾಗಿ ಮಾಡಲು ಬರುತ್ತದೆ. ಇಂತಹ ಮೌಲ್ಯಮಾಪನವು ವರ್ತಮಾನದ ಸ್ಥಿತಿಗತಿಯನ್ನು ಗುರ್ತಿಸುವುದು ಮಾತ್ರವಲ್ಲದೆ, ಭವಿಷ್ಯದ ಸಾಧ್ಯತೆಗಳನ್ನೂ ಲಕ್ಷ್ಯದಲ್ಲಿರಿಸಿಕೊಳ್ಳುತ್ತದೆ.

ಸ್ವಯಂ ಸೇವಕ ಸಂಘಟನೆಯು ಆಗಾಗ ತನ್ನ ಪ್ರಾಯೋಗಿಕ ವಿಧಾನವನ್ನು ಪರೀಕ್ಷಿಸಿಕೊಳ್ಳುತ್ತಾ, ತಾವು ಮಾಡುತ್ತಿರುವ ಕೆಲಸ ನಿಜವಾಗಿಯೂ ದುರ್ಬಲರ ಉದ್ಧಾರಕ್ಕೆ ನೆರವಾಗುತ್ತಿದೆಯೇ ಎಂಬುದನ್ನು ಚಿಂತಿಸುತ್ತದೆ.

ಮೌಲ್ಯಮಾಪನವು ಕೇವಲ ಗುಣಗಳನ್ನು ಮಾತ್ರವಲ್ಲ, ಪ್ರಯೋಗದ ದೋಷಗಳನ್ನು ಅಷ್ಟೇ ಎಚ್ಚರದಿಂದ ಪರಿಶೀಲಿಸುತ್ತದೆ. ಪ್ರತಿಯೊಂದು ನಿಗದಿತ ಮೌಲ್ಯಮಾಪನವೂ ತತ್ಕಾಲೀನ ಮತ್ತು ಮುಂದಿನ ಕಾರ್ಯಕ್ರಮದ ಸಂಯೋಜನೆಗೆ ಸೂಕ್ತವಾದ ಒಳನೋಟಗಳನ್ನು ಕೊಡುವಂಥದು ಎಂಬುದನ್ನು ನಾವು ಮರೆಯುವಂತಿಲ್ಲ.

**ಬಾಲವಾಡಿಗಳು**

ಶೈಕ್ಷಣಿಕ ಚಳುವಳಿಯನ್ನು ಸಾಂದ್ರಗೊಳಿಸುವುದು ಬಾಲವಾಡಿಗಳ ಉದ್ದೇಶ. ಹೀಗೆ ಮಾಡುವುದರಿಂದ ದುರ್ಬಲವರ್ಗದ ಜೀವನವನ್ನು ವೈಯಕ್ತಿಕ ನೆಲೆಯಲ್ಲೂ ಕೂಡ ಸ್ಪರ್ಶಿಸುವುದು ಸಾಧ್ಯವಾಗುತ್ತದೆ. ಈ ಚಳುವಳಿಯ ಪ್ರಧಾನ ಅಂಶವೆಂದರೆ ದುರ್ಬಲ ವರ್ಗದಲ್ಲಿ ಹೊಸ ಎಚ್ಚರವನ್ನು ಮೂಡಿಸುವುದು. ಈ ಜನಾಂಗವು ತಮ್ಮ ಮಕ್ಕಳು ಇಡೀ ದೇಶದ ಒಟ್ಟು ಸಮುದಾಯದಲ್ಲಿ ಬೆರೆತು ಯಾವುದೇ ಭೇದ ಭಾವವಿಲ್ಲದೆ, ಪಕ್ಷಪಾತವಿಲ್ಲದೆ ಸಮಾನ ಅವಕಾಶಗಳನ್ನು ಪಡೆದು ಅತ್ಯುತ್ತಮ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಣವನ್ನು ಪಡೆಯುತ್ತಾರೆ ಎಂಬ ಅರಿವನ್ನು ಪಡೆಯುವುದರಲ್ಲಿ 'ಸಶಾಚ'ದ ಸಾರ್ಥಕ್ಯವಿದೆ. ಈ ಮಕ್ಕಳು ಪಡೆಯುವ ಶಿಕ್ಷಣವು ಹೊಸ ಹೊಸ ಶಿಕ್ಷಣ ತರಗತಿಗಳಿಂದ ಸುಧಾರಿತವಾದುದು ಎಂಬುದೂ ಕೂಡ ಮುಖ್ಯವಾದ ಮಾತು. ಇದು ಸಾಧ್ಯವಾಗಬೇಕಾದರೆ ಪ್ರಾಥಮಿಕ ಶಿಕ್ಷಣಕ್ಕೆ ಮೊದಲೇ ಮಗುವಿನ ಮನಸ್ಸನ್ನು ಸರಿಯಾದ ರೀತಿಯಲ್ಲಿ ತಿದ್ದಿ ಬೆಳೆಸಬೇಕಾಗುವುದು. ಅಂತಹ ಸಂದರ್ಭದಲ್ಲಿ ಈ ಬಾಲವಾಡಿಗಳು ತುಂಬ ಅಗತ್ಯ. ಈ ಆರಂಭದ ಹಂತದಲ್ಲಿ ಮಕ್ಕಳು ಆತ್ಮವಿಶ್ವಾಸವನ್ನು ಪಡೆಯುವಂತೆ ಅವರ ಮನಸ್ಸನ್ನು ರೂಪಿಸಬೇಕಾಗುವುದು. ತಮ್ಮ ಸುತ್ತಲ ಸಂದರ್ಭದ ಸಂಪೂರ್ಣ ಅರಿವು, ಪಡೆದುಕೊಳ್ಳಬಹುದಾದ ಸಾಮಾಜಿಕ ನೈಪುಣ್ಯಗಳು ಹಾಗೂ ಸಹಜವಾದ ವಿದ್ಯಾದಾಹವನ್ನು ಮಕ್ಕಳಲ್ಲಿ ಉಂಟುಮಾಡುವುದು ಈ ಬಾಲವಾಡಿಗಳ ಉದ್ದೇಶ. ಸಣ್ಣ ಸಣ್ಣ ಹಳ್ಳಿಗಳಲ್ಲಿ, ಕುಗ್ರಾಮಗಳಲ್ಲಿ ಬಾಲವಾಡಿಗಳನ್ನು ಸ್ಥಾಪಿಸುವ ಮೂಲಕ ಈ ಗುರಿಯನ್ನು ಸಾಧಿಸಲಾಗುವುದು. ಈಗಾಗಲೇ ಆರಂಭಿಕ ಶಿಕ್ಷಣ ಸಂಸ್ಥೆಗಳು ಇರುವಲ್ಲಿ ನಾವು ನಮ್ಮ ಬಾಲವಾಡಿಗಳನ್ನು ತೆರೆಯುವ ಅಗತ್ಯವಿಲ್ಲ. ಎಲ್ಲಿ ನಿಜವಾಗಿಯೂ ಅಗತ್ಯವಿದೆಯೋ ಅಂತಹ ಕಡೆ ಈ ಸಂಸ್ಥೆಗಳನ್ನು ಆರಂಭಿಸುವುದು ಒಳ್ಳೆಯ ಫಲಿತಾಂಶವನ್ನು ನೀಡುತ್ತದೆ. ಹಾಗೆ ಬಾಲವಾಡಿಗಳನ್ನು ಆರಂಭಿಸುವ ಮುನ್ನ ಆ ಹಳ್ಳಿಯ ಜನರೊಂದಿಗೆ ಆ ಬಗ್ಗೆ ಚರ್ಚೆ ನಡೆಸಿ ಅವರಿಗೆ ಅಂತಹ ಸಂಸ್ಥೆಯ ಅಗತ್ಯ ಮನದಟ್ಟಾಗುವಂತೆ ಮಾಡಿ ಆ

ನಂತರ ಬಾಲವಾಡಿಗಳನ್ನು ಸ್ಥಾಪಿಸಬೇಕಾಗುವುದು. ಈ ಬಾಲವಾಡಿಯಲ್ಲಿ ಕೆಲಸ ಮಾಡುವ ಶಿಕ್ಷಕರನ್ನು ಆ ಹಳ್ಳಿಗಳಿಂದಲೇ ಆರಿಸಿ, ಅವರಿಗೆ ವಿಶೇಷ ರೀತಿಯ ಮಾರ್ಗದರ್ಶನ ನೀಡಿ ಅವರನ್ನು ಬಾಲವಾಡಿಗಳಿಗೆ ಶಿಕ್ಷಕರಾಗಿ ನೇಮಿಸಬೇಕು. ಆರಂಭದ ಹಂತದಲ್ಲಿ ಇಂತಹ ಬಾಲವಾಡಿಗಳಿಗೆ ಸ್ವಂತ ಕಟ್ಟಡ ಇಲ್ಲದಿರಬಹುದು. ಯಾವುದೇ ಸಾರ್ವಜನಿಕ ಕಟ್ಟಡವನ್ನು ನಾವು ಈ ಉದ್ದೇಶಕ್ಕೆ ಬಳಸಬಹುದು. ಅವುಗಳಿಲ್ಲದಿದ್ದರೆ ವಾಸದ ಮನೆಗಳಾದರೂ ನಡೆಯುತ್ತದೆ. ಅದೂ ದೊರೆಯದೆ ಹೋದರೆ ಮರದ ಕೆಳಗೆ ಶಾಲೆಯನ್ನು ಆರಂಭಿಸಬಹುದು. ಇದರಿಂದ ಸಹಜವಾಗಿಯೇ ಪ್ರಭಾವಿತರಾಗುವ ಜನರು ಬಾಲವಾಡಿಗೆ ಅಗತ್ಯವಾದ ಸ್ಥಳ ಮತ್ತು ಕಟ್ಟಡವನ್ನು ದೊರಕಿಸಿಕೊಟ್ಟೇ ಕೊಡುತ್ತಾರೆ. ಏಕೆಂದರೆ ಇಂಥ ಸಂಸ್ಥೆಗಳಿಂದ ಅವರ ಮಕ್ಕಳಿಗೆ ಆಗುತ್ತಿರುವ ಅನುಕೂಲಗಳನ್ನು ಅವರು ಪ್ರತ್ಯಕ್ಷವಾಗಿ ನೋಡಿರುತ್ತಾರೆ. ಆಗ ಅವರನ್ನು ಸಂಸ್ಥೆಗೆ ಕಟ್ಟಡವನ್ನು ನೀಡಲು, ಅಗತ್ಯವೆನಿಸಿದರೆ ಪ್ರಚೋದಿಸುವುದೂ ಸುಲಭ. ಅಂತಹ ಸ್ಥಳ ವಿಶಾಲವಾದ ಆಟದ ಮೈದಾನ, ಅಚ್ಚುಕಟ್ಟಾದ ಕಟ್ಟಡ ಇವುಗಳನ್ನು ಹೊಂದಲು ಯುಕ್ತವಾಗಿದ್ದರೆ ಸಾಕು. ಒಳ್ಳೆಯ ಬಾಲವಾಡಿಯೊಂದರಲ್ಲಿ ಉಪಯುಕ್ತವಾಗುವ ಶಿಕ್ಷಣ ಸಹಾಯಕ ಸಾಮಗ್ರಿಗಳೂ, ಒಳ್ಳೆಯ ಪರಿಸರವೂ ಮಗುವಿನ ಆರೋಗ್ಯಕರ ಶೈಕ್ಷಣಿಕ ಪ್ರಗತಿಗೆ ಇರಲೇಬೇಕು. ಮಗುವಿಗೆ ನಿತ್ಯವೂ ದೊರಕಬೇಕಾದ ಆಹಾರದ ಪೌಷ್ಟಿಕಾಂಶದ ಬಗ್ಗೆಯೂ ನಾವು ತಂದೆ ತಾಯಿಯರಿಗೆ ಹೊಸ ಅರಿವನ್ನು ಮೂಡಿಸಬೇಕು. ಸಾಧ್ಯವಾದರೆ ಶಾಲೆಯನ್ನು ನಡೆಸಲು ಹಳ್ಳಿಯಲ್ಲೇ ಒಂದು ಶಾಶ್ವತವಾದ ಆಸ್ತಿಯನ್ನು ಮಾಡುವುದು ಒಳ್ಳೆಯದು.

ಒಂದು ಸಾರಿ ಇಂತಹ ಬಾಲವಾಡಿಗಳನ್ನು ಸ್ಥಾಪಿಸಿದ ಮೇಲೆ ಅವುಗಳಿಗೆ ಸಹಾಯ ಧನವನ್ನು ಸರ್ಕಾರದಿಂದ ಪಡೆಯುವುದು ಕಷ್ಟವೇನೂ ಆಗುವುದಿಲ್ಲ. ಹೊಸ ಹೊಸ ಬಾಲವಾಡಿಗಳು ಪ್ರಾರಂಭವಾಗುತ್ತಿದ್ದಂತೆ ಹಳೆಯ ಬಾಲವಾಡಿಗಳನ್ನು ನೋಡಿಕೊಳ್ಳಲು ಹಳ್ಳಿಯ ಜನತೆಯನ್ನೇ ನಾವು ಸಿದ್ಧಮಾಡಬಹುದು.

ಸರ್ಕಾರೀ ಶಿಕ್ಷಣ ಕಛೇರಿ ಮತ್ತು ಶೈಕ್ಷಣಿಕ ಅಧಿಕಾರಿಗಳೂ ಹಾಗು ಉಪಾಧ್ಯಾಯರೊಂದಿಗೆ ಉತ್ತಮ ಸಂಬಂಧವನ್ನು ಇಟ್ಟುಕೊಳ್ಳುವುದು ಮಾತ್ರ ತುಂಬಾ ಮುಖ್ಯ. ಬಾಲವಾಡಿಯನ್ನು ನಡೆಸಲು ನೇಮಿತವಾಗಿರುವ ಸಂಘವು ಆಗಾಗ್ಗೆ ಸಭೆ ನಡೆಸಿ, ಸಮಸ್ಯೆಗಳನ್ನು ಚರ್ಚಿಸಿ, ಸೂಕ್ತ ತೀರ್ಮಾನಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಬೇರೆ ಬೇರೆ ಬಾಲವಾಡಿಗಳ ನಡುವೆ ವಿನಿಮಯಗಳು ನಡೆಯುವುದರಿಂದ ಸಮಸ್ಯೆಗಳನ್ನು ಎದುರಿಸುತ್ತಿರುವ ಬಾಲವಾಡಿಯು, ಬೇರೆ ಬಾಲವಾಡಿಗಳ ಮಾದರಿಗಳನ್ನು ಅನುಸರಿಸಿ ತನ್ನ ಸಮಸ್ಯೆಯನ್ನು ತಿದ್ದಿಕೊಳ್ಳಲು ಸಾಧ್ಯವಾಗುವುದು. ಬೇರೆ ಸಂಘಗಳು ಹೀಗೆ ಒಟ್ಟಿಗೆ ಕೂಡಿ ಚರ್ಚಿಸುವ ಪ್ರಕ್ರಿಯೆಯು ಸಹಜವಾಗಿಯೇ ಒಂದು ಜನತಾ ಚಳುವಳಿಯನ್ನು ರೂಪಿಸುವುದು.

ಒಟ್ಟಾರೆ ಕೆಳಕಂಡಂತೆ ಈ ಬಾಲವಾಡಿಗಳ ಗುರಿಗಳನ್ನು ಪಟ್ಟಿಮಾಡಬಹುದು :

1. ಆಯ್ದುಕೊಂಡ ಕ್ಷೇತ್ರದ 3 ರಿಂದ 6 ವರ್ಷದವರೆಗಿನ ಪ್ರತಿಯೊಂದು ಮಗುವೂ ಬಾಲವಾಡಿಯಲ್ಲಿ ಆತ್ಮವಿಶ್ವಾಸವನ್ನು ಪಡೆಯುವಂತೆ ಶಿಕ್ಷಣ ನೀಡುವುದು.

2. ಆ ಮಗುವಿಗೆ ಸಮಾಜದಲ್ಲಿ ಬದುಕುವ ಮತ್ತು ಕಲಿಯುವ ನೈಪುಣ್ಯವನ್ನು ಒದಗಿಸಲು ಈ ಹಂತದಲ್ಲೇ ಸಹಾಯ ಮಾಡುವುದು. ಇದರಿಂದ ಮಗು ಪ್ರಾಥಮಿಕ ಶಿಕ್ಷಣದಲ್ಲಿ ಮಾತ್ರವಲ್ಲ, ಇಡೀ ಬದುಕಿನಲ್ಲೇ ಫಲಪ್ರದವಾದ ಸಾಧನೆಗಳನ್ನು ಮಾಡುವಂತಾಗುವುದು.

3. ಮಗುವಿನ ಮನಸ್ಸನ್ನು ಪ್ರಚೋದಿಸುವಂತಹ ಪರಿಸರವನ್ನು ನಿರ್ಮಿಸಿ ಮಗುವಿನ ಕುತೂಹಲವನ್ನು ಕೆರಳಿಸಿ, ಅದು ಕಾರ್ಯಶೀಲವಾಗುವಂತೆ, ಸಂಘಟಿತವಾಗಿ ಕೆಲಸ ಮಾಡುವಂತೆ, ದೈಹಿಕವಾಗಿ ಮತ್ತು ಮಾನಸಿಕವಾಗಿ ವಿಶೇಷವಾದ ಸಾಮರ್ಥ್ಯವನ್ನು ಪಡೆಯುವಂತೆ ಮಾಡುವುದು.

4. ಜನತೆಯೇ, ಅದರಲ್ಲೂ, ದುರ್ಬಲವರ್ಗದ ಜನತೆಯೇ ಬಾಲವಾಡಿಗಳನ್ನು ನಡೆಸುವ ಜವಾಬ್ದಾರಿಯನ್ನು ವಹಿಸಿಕೊಳ್ಳುವಂತೆ ಮಾಡುವುದು.

5. ಸರ್ಕಾರವು ಈ ಬಾಲವಾಡಿಗಳನ್ನು ಗಮನಿಸುವಂತೆ ಆಕರ್ಷಿಸುವುದು ಮತ್ತು ಸಹಾಯಧನವನ್ನು ಪಡೆಯುವಂತೆ ಮಾಡುವುದು.

6. ಶಿಕ್ಷಣ ಇಲಾಖೆ ಪರಿಣಾಮಕಾರಿಯಾಗುವಂತೆ, ತಾಯಿತಂದೆಯರೂ ಮತ್ತು ಶಿಕ್ಷಕರೂ ಶಿಕ್ಷಣ ಪ್ರಕ್ರಿಯೆಯಲ್ಲಿ ಪಾಲುದಾರರಾಗುವಂತೆ ಮಾಡುವುದು.

**ಪ್ರಾಥಮಿಕ ಶಿಕ್ಷಣ ಸಾರ್ವತ್ರಿಕತೆಯನ್ನು ಸಾಧಿಸುವುದಕ್ಕೆ ಮುಖ್ಯ ಸೂಚನೆಗಳು**

1. ಸಾಂಸ್ಕೃತಿಕ ಸಂವಾದವನ್ನು ಸೃಷ್ಟಿಸುವುದು ಹಾಗೂ ಆ ಮೂಲಕ ಉನ್ನತ ಮೌಲ್ಯಗಳನ್ನು ಕಲಿಯಲು ನೆರವಾಗುವುದು.

2. ತಾಯಿತಂದೆಯರನ್ನು ಹೊಸ ಶಿಕ್ಷಣ ಪದ್ಧತಿಗೆ ಪ್ರೇರೇಪಿಸುವುದು.

3. ದುರ್ಬಲ ಜನಾಂಗದಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣದ ಅಗತ್ಯದ ಬಗ್ಗೆ ಎಚ್ಚರ ಮೂಡಿಸುವುದು.

4. ದುರ್ಬಲ ವರ್ಗದ ಪ್ರತಿಯೊಂದು ಮಗುವೂ ಪೂರ್ವ ಪ್ರಾಥಮಿಕ ಶಾಲೆಗೆ ಸೇರುವಂತಾದರೆ ಸಹಜವಾಗಿಯೇ ಆ ಮಗು ಪ್ರಾಥಮಿಕ ಶಾಲೆಗೂ ಹೋಗುತ್ತದೆ. ಈಗ ಅಸ್ತಿತ್ವದಲ್ಲಿರುವ ಪ್ರಾಥಮಿಕ ಶಾಲೆಗಳ ಅನುಕೂಲಗಳು ಶಾಲೆಯ ಮಕ್ಕಳ ಅರ್ಧ ಸಂಖ್ಯೆಗೆ ಮಾತ್ರ ಸಾಕಾಗುವಂತಿದೆ. ಜನತೆಯ ಒತ್ತಾಯದ ಮೇರೆಗೆ ಈ ಶಾಲೆಗಳ ಒಟ್ಟಾರೆ ರಚನೆಯನ್ನೇ ಸರ್ಕಾರ ಬದಲಿಸಬೇಕಾಗುತ್ತದೆ. ಒಂದೆರೆಡು ವರ್ಷಗಳಲ್ಲಿ

ಏಕೋಪಾಧ್ಯಾಯ ಶಾಲೆಗಳೇ ಇಲ್ಲದಂತಾಗಿ ಮಕ್ಕಳಿಗೆ ಉತ್ತಮ ಶಿಕ್ಷಣ ದೊರೆಯುವ ಅವಕಾಶ ಹೆಚ್ಚಾಗುತ್ತದೆ.

## ಪ್ರಾಥಮಿಕ ಶಿಕ್ಷಣ

'ಸಶಾಚ'ದ ಹತ್ತಿರದ ಗುರಿಯೆಂದರೆ–ಪ್ರಾಥಮಿಕ ಶಿಕ್ಷಣ (ಕರ್ನಾಟಕದಲ್ಲಿ4+3). ಏಕೆಂದರೆ ಉನ್ನತ ಶಿಕ್ಷಣಕ್ಕೆ ಇದು ಮೊದಲ ಮೆಟ್ಟಿಲು. ಆಧುನಿಕ ವಿಜ್ಞಾನ ಹಾಗೂ ತಂತ್ರಜ್ಞಾನದ ಜಗತ್ತಿಗೆ ಪ್ರವೇಶ ಪಡೆಯಲು ಇದು ಸಾಧನ. ಸಂಕೀರ್ಣವಾದ ಆಧುನಿಕವಾದ ಜಗತ್ತನ್ನು ಅರ್ಥಮಾಡಿಕೊಳ್ಳಲು ಶಿಕ್ಷಣ ಅತ್ಯಗತ್ಯ. ದುರ್ಬಲವರ್ಗಕ್ಕೆ ಸಾರ್ವತ್ರಿಕವಾಗಿ ಪ್ರಾಥಮಿಕ ಶಿಕ್ಷಣವನ್ನು ನೀಡಲು ನಾವು ಗಂಭೀರವಾಗಿ ಪ್ರಯತ್ನಿಸದಿದ್ದಲ್ಲಿ ಈಗಿರುವ ನ್ಯಾಯಬಾಹಿರವಾದ ಪ್ರತ್ಯೇಕ ವರ್ಗಗಳ ಸಮಾಜವೇ ಮುಂದುವರಿಯುತ್ತದೆ. ಇದರಿಂದಾಗಿ ದುರ್ಬಲ ವರ್ಗ ನಾಡಿನ ಮುಖ್ಯ ಪ್ರವಾಹದಲ್ಲಿ ಒಂದಾಗುವುದು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ತಮ್ಮ ಬದುಕಿಗೆ ಮುಳುವಾಗುವ ನಿರ್ಧಾರಗಳಲ್ಲಿ ಇವರು ಮೌನಪ್ರೇಕ್ಷಕರಾಗಿರಬೇಕಾಗುತ್ತದೆ. ಗಮನಿಸಬೇಕಾದ ಮುಖ್ಯ ಸಂಗತಿಯೆಂದರೆ ಕಡೆಯ ಪಕ್ಷ ನಾಲ್ಕು ವರ್ಷಗಳ ಶಿಕ್ಷಣವಾದರೂ ಇಲ್ಲದಿರುವ ವ್ಯಕ್ತಿ ಬಹಳಬೇಗ ಅನಕ್ಷರಸ್ತರ ಗುಂಪಿಗೆ ಸೇರಿಬಿಡುತ್ತಾನೆ.

ಈಗ ಅಸ್ತಿತ್ವದಲ್ಲಿರುವ ಪ್ರಾಥಮಿಕ ಶಾಲೆಗಳ ಸ್ಥಿತಿಗತಿ ಒಂದು ಹಳ್ಳಿಯ ಕೇವಲ ಶೇಕಡಾ 60 ರಷ್ಟು ಮಕ್ಕಳನ್ನು ಮಾತ್ರ ಸೇರಿಸಿಕೊಳ್ಳುವಂತಿದೆ. ಎಲ್ಲ ಮಕ್ಕಳಿಗೂ ಅಲ್ಲಿ ಸ್ಥಳಾವಕಾಶವಿಲ್ಲ. ಒಂದೇ ಕೊಠಡಿಯಲ್ಲಿ ನಾಲ್ಕು ತರಗತಿಗಳನ್ನು ಒಟ್ಟಿಗೇ ಸೇರಿಸಿ ಒಬ್ಬನೇ ಉಪಾಧ್ಯಾಯ ಪಾಠ ಮಾಡುವ ಪರಿಸ್ಥಿತಿ ಇದೆ. ಇದು ಮಕ್ಕಳಲ್ಲಿ ಕಲಿಕೆಯ ಬಗ್ಗೆ ಕುತೂಹಲ ಆಸಕ್ತಿಗಳನ್ನು ಮೂಡಿಸದೆ, ಅರ್ಧದಷ್ಟು ಮಕ್ಕಳು ಬೇಸರ ನಿರಾಶೆಗಳಿಂದ ಶಾಲೆ ಬಿಟ್ಟು ಬಿಡುತ್ತಾರೆ. ಜೊತೆಗೆ ಬದುಕಿನಲ್ಲೂ ಹೆಚ್ಚು ಫಲಪ್ರದವಲ್ಲದ ಈ ಶಿಕ್ಷಣ ಸಹ ಮಕ್ಕಳನ್ನು ಶಾಲೆಗೆ ಕಳಿಸುವ ಬದಲು ಯಾವುದಾದರೂ ಕೆಲಸಗಳಿಗೆ ಕಳಿಸುವುದೇ ವಾಸಿ ಎಂಬ ಮನೋಭಾವವನ್ನು ತಂದೆ ತಾಯಿಗಳಲ್ಲಿ ಮೂಡಿಸುತ್ತದೆ. ಹೀಗಾಗಿ ಪ್ರಾಥಮಿಕ ಶಿಕ್ಷಣಕ್ಕೆ ಖರ್ಚು ಮಾಡುತ್ತಿರುವ ಹಣ ನಿರರ್ಥಕ. ಈ ಸ್ಥಿತಿ ಬದಲಾಗಬೇಕಿದ್ದಲ್ಲಿ ತಂದೆತಾಯಿಗಳು ಮಕ್ಕಳ ಶಿಕ್ಷಣಕ್ಕೆ ಮೊದಲ ಆದ್ಯತೆಯನ್ನು ನೀಡುವಂತೆ ಶಿಕ್ಷಣ ಕ್ರಮದಲ್ಲಿ ಸುಧಾರಣೆಗಳಾಗಲು ಅವರು ಪ್ರಯತ್ನಿಸುವಂತೆ ತಂದೆತಾಯಿಗಳ ಮನೋಭಾವದಲ್ಲಿ ಬದಲಾವಣೆಯಾಗಬೇಕು. ತಂದೆತಾಯಿಗಳು, ಅಧ್ಯಾಪಕರು ಹಾಗೂ ಶಿಕ್ಷಣ ಇಲಾಖೆ ಒಂದಾಗಿ, ಪರಸ್ಪರ ಪೂರಕವಾಗಿ ಕೆಲಸ ಮಾಡುವ ವಾತಾವರಣ ನಿರ್ಮಾಣವಾಗಬೇಕು. 'ಸಶಾಚ' ಈ ಮೂರು ಅಂಗಗಳು ಪರಸ್ಪರ ಅರ್ಥಪೂರ್ಣವಾಗಿ ಕೆಲಸ ಮಾಡುವಂತೆ ಶ್ರಮಿಸುತ್ತದೆ.

ಇವರೆಲ್ಲರ ಆಶಯದ ಕೇಂದ್ರಬಿಂದು ಪ್ರಾಥಮಿಕ ಶಾಲೆಗಳು ಆಗುವುದರತ್ತ 'ಸಶಾಚ' ಪ್ರಯತ್ನಿಸುತ್ತದೆ.

ಹಳ್ಳಿಗಳಲ್ಲಿ ದೊರೆಯುವ ಅನುಕೂಲಗಳನ್ನು ಲಕ್ಷಿಸಿ 3-4ರೀತಿಯ ಮಾದರಿಯ ಪ್ರಾಥಮಿಕ ಶಾಲೆಗಳನ್ನು ಅಲ್ಲಿಯ ಜನತೆಯ ಸಹಾಯದಿಂದ ರೂಪಿಸ ಬೇಕು. ಆ ಮೂಲಕ ಉಳಿದ ಹಳ್ಳಿಗಳ ಜನರು ಇದಕ್ಕನುಗುಣವಾಗಿ ಶಾಲೆಗಳನ್ನು ರಚಿಸಿಕೊಳ್ಳಲು ಪ್ರಯತ್ನಿಸಬಹುದು. ಹೆಚ್ಚಿನ ಶಿಕ್ಷಕರನ್ನು ನೇಮಿಸಿ, ಅವರ ಸೇವೆಯನ್ನು ಪರಿಗಣಿಸಿ ಖಾಯಂ ಮಾಡಿಕೊಳ್ಳುವಂತೆ ಸರ್ಕಾರವನ್ನು ಕೇಳಿಕೊಳ್ಳ ಬಹುದು. ಆ ಮೂಲಕ ಬೋಧನೆ ಹಾಗೂ ಕಲಿಕೆಯಲ್ಲಿ ಹೊಸ ವಾತಾವರಣವೊಂದನ್ನು ಸೃಷ್ಟಿಸಲು ಸಾಧ್ಯ. ಪ್ರಾಥಮಿಕ ಶಾಲಾ ಶಿಕ್ಷಣವನ್ನು ಪರಿಣಾಮಕಾರಿಯಾಗಿ ಮಾಡಲು ಶಿಕ್ಷಣ ಸಹಾಯಕ ಸಾಮಗ್ರಿಗಳು, ವೈಜ್ಞಾನಿಕ ಬೋಧನಾ ವಿಧಾನಗಳು ಮೊದಲಾದ ಅನೇಕ ಸಾಧನಗಳಿವೆ. ಗಾಂಧೀಜಿಯವರ **ಮೂಲಶಿಕ್ಷಣಮಾದರಿ** ಪ್ರಾಥಮಿಕ ಶಿಕ್ಷಣ ಉತ್ತಮಗೊಳಿಸಲು ಅನೇಕ ಒಳನೋಟಗಳನ್ನೂ, ಅನುಸಂಧಾನಗಳನ್ನೂ ಒದಗಿಸಿ ಕೊಡುತ್ತದೆ.

### ಎನ್. ಎಫ್. ಇ-ಪ್ರಾಥಮಿಕ ಶಾಲೆ ಬಿಟ್ಟ ಮಕ್ಕಳಿಗೋಸ್ಕರ :

ಕರ್ನಾಟಕದ ಉನ್ನತ ಪ್ರಾಥಮಿಕ ಶಾಲೆಗಳಲ್ಲಿ 10 ರಿಂದ 14 ವರ್ಷಗಳ ಗುಂಪಿನ ಮಕ್ಕಳ ಸಂಖ್ಯೆ ಶೇಕಡಾ 25 ರಿಂದ ಶೇಕಡಾ 30ಕ್ಕಿಂತ ಹೆಚ್ಚಿಲ್ಲ. ಅಂದರೆ ಉಳಿದ ಶೇಕಡಾ 70 ರಷ್ಟು ಮಕ್ಕಳು ಏನಾದರು ? ಕ್ರಾಂತಿಕಾರಕ ಕಾರ್ಯ ಕ್ರಮಗಳನ್ನು ಹಾಕಿಕೊಳ್ಳದಿದ್ದಲ್ಲಿ ಈ ನತದೃಷ್ಟರು ಅನಕ್ಷರಸ್ಥರಾಗಿಯೇ ಉಳಿಯುತ್ತಾರೆ. ಅಥವಾ ಆಧುನಿಕ ಸಮಾಜದ ಪ್ರವಾಹದೊಂದಿಗೆ ಸಾಗಲು ಬೇಕಾದ ನೈಪುಣ್ಯತೆ ಇಲ್ಲದ ವಿದ್ಯೆ ಗಳಿಸುತ್ತಾರೆ. ಅವರ ಪ್ರತಿಭಾಸಾಮರ್ಥ್ಯವೆಲ್ಲ ಕೆಲವು ದೈಹಿಕ ಕೆಲಸಗಳಿಗೆ ಮಾತ್ರ ಸೀಮಿತವಾಗಿ ಬಿಡುತ್ತದೆ. ಜಮೀನುದಾರರ ಬಳಿ ಜೀತದಾಳುಗಳಾಗಿ ದುಡಿಯುವ ಸ್ಥಿತಿ ತಲುಪುತ್ತಾರೆ. ಮುಂದುವರಿದ ಸಮಾಜದಲ್ಲಿ ಅರ್ಥಪೂರ್ಣವಾಗಿ ಬದುಕುವ ಅವರ ಕನಸು ನುಚ್ಚುನೂರಾಗುತ್ತದೆ. ಅವರಲ್ಲಿ ಕೆಲವರು ಸಮಾಜಕ್ಕೆ ಹೊರೆಯಾಗುತ್ತಾರೆ. ಮತ್ತೆ ಕೆಲವರು ವಿಧ್ವಂಸಕ ಕೃತ್ಯಗಳಿಗೆ ಕಾರಣವಾಗುತ್ತಾರೆ.

ಶಾಲೆ ಬಿಟ್ಟ ಮಕ್ಕಳ ಈ ಸಮಸ್ಯೆಯನ್ನು ನಾವು ಅತ್ಯಂತ ಎಚ್ಚರದಿಂದ ಎದುರಿಸ ಬೇಕು, ವಿಸ್ತೃತ ಯೋಜನೆಗಳನ್ನು ಹಾಕಿಕೊಳ್ಳಬೇಕು. ಆದರೆ ಇಂಥವರಿಗಾಗಿ ಕಾರ್ಯ ಕ್ರಮಗಳನ್ನು ಮೊದಲು ರೂಪಿಸುವವರು ಯಾರು ? ಆಸಕ್ತಿ ವಹಿಸುವವರು ಯಾರು ? ಸರಕಾರಕ್ಕೆ ಈ ಬಗ್ಗೆ ಅರಿವಿದ್ದರೂ ಶಾಲೆಬಿಟ್ಟ ಮಕ್ಕಳ ಈ ಸ್ಥಿತಿಯನ್ನು ಎದುರಿಸುವ ಸವಾಲನ್ನು ಅದು ಒಪ್ಪಿಕೊಂಡಂತಿಲ್ಲ. ಆದ್ದರಿಂದ ಮತ್ತೆ ದುರ್ಬಲವರ್ಗವೇ ಈ ಜವಾಬ್ದಾರಿಯನ್ನೂ ವಹಿಸಿಕೊಳ್ಳಬೇಕು. ಏಕೆಂದರೆ ಅವರ ಮಕ್ಕಳೇ ಈ ಗುಂಪಿನಲ್ಲಿ

ಹೆಚ್ಚಿನ ಸಂಖ್ಯೆಯಲ್ಲಿ ಇರುವವರು. ಮುಂದಿನ ಪೀಳಿಗೆಯ ಬದುಕು ಹಸನಾಗಲು ಈಗಲೇ ಅವರು ಈಸ್ಥಿತಿಯ ಬಗ್ಗೆ ಎಚ್ಚರವಹಿಸಬೇಕು. ಈ ಗುರುತರವಾದ ಸಮಸ್ಯೆಯನ್ನು ಎಲ್ಲಾ ಜನಗಳ ಸಹಕಾರದೊಂದಿಗೆ ದೃಢ ಮನಸ್ಸಿದ್ದಲ್ಲಿ ಎದುರಿಸಲು ಸಾಧ್ಯ. ಯಾರಿಗೆ ಈಸಮಾಜದಲ್ಲಿ ಬದಲಾವಣೆ ತೀರಾ ಅಗತ್ಯವೆನಿಸಿದೆಯೋ ಅಂಥವರ ಸಹಕಾರದಿಂದ ಈಸಮಸ್ಯೆಯನ್ನು ಹೆಚ್ಚು ಸುಲಭವಾಗಿ ಎದುರಿಸಬಹುದು.

'ಸಶಾಚ'ವು ಹಳ್ಳಿಗಳಲ್ಲಿ ಎನ್. ಎಫ್. ಇ. ಯನ್ನು ಸಂಘಟಿಸಲು ಪ್ರಾಮಾಣಿಕವಾಗಿ ಶ್ರಮಿಸುತ್ತದೆ. ಅಲ್ಲಿಯ ಜನಗಳಲ್ಲಿಯೇ ಕೆಲವರನ್ನು ಆಯ್ದು ಶಿಕ್ಷಣ ತರಬೇತಿ ನೀಡಿ, ಸೂಕ್ತ ಶಿಕ್ಷಣ ಸಹಾಯಕ ಸಾಮಗ್ರಿಗಳನ್ನು ಒದಗಿಸಿ, ವೈಜ್ಞಾನಿಕ ವಿಧಾನಗಳ ಪರಿಚಯ ಮಾಡಿಕೊಟ್ಟು ಶಿಕ್ಷಕರನ್ನಾಗಿ ನೇಮಿಸುತ್ತದೆ. ಶಾಲೆ ಬಿಟ್ಟ ಮಕ್ಕಳು ಬಹಳಷ್ಟು ಜನ ಹಗಲು ಹಲವೆಡೆ ದುಡಿಯುವುದರಿಂದ ಅವರಿಗೆ ಸೂಕ್ತವಾದ ವೇಳೆಯನ್ನು ನಿಗದಿ ಮಾಡಲಾಗುತ್ತದೆ. 'ಗಳಿಕೆಯೊಂದಿಗೆ ಕಲಿಕೆ', 'ವೃತ್ತಿಮುಖೇನ ಶಿಕ್ಷಣ', 'ಕರಕುಶಲ ನೈಪುಣ್ಯ'–ಮೊದಲಾದವುಗಳನ್ನು ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ಅಳವಡಿಸುವುದರ ಮೂಲಕ ಕಲಿಕೆಯನ್ನು ಆಸಕ್ತಿದಾಯಕವನ್ನಾಗಿಸಬಹುದು. ಶಾಲೆಬಿಟ್ಟ ಮಕ್ಕಳಲ್ಲಿ ಬುದ್ಧಿವಂತರಿದ್ದಲ್ಲಿ ಅವರನ್ನು ಮತ್ತೆ ಲಭ್ಯವಿರುವ ಶಾಲೆಗೆ ಸೇರಿಸಲು ಸಹಾಯ ಮಾಡಬಹುದು. ಈ ಕಾರ್ಯಕ್ರಮ ಯಶಸ್ವಿಯಾಗಲು ಸರ್ಕಾರೀ ಇಲಾಖೆಗಳೊಂದಿಗೆ ಹಾಗೂ ಸರ್ಕಾರದೊಂದಿಗೆ ಸಂಬಂಧವಿರುವ ಸಂಸ್ಥೆಗಳೊಂದಿಗೆ ನಿಕಟವಾದ ಆತ್ಮೀಯವಾದ ಸಂಬಂಧ ಅತ್ಯಗತ್ಯ.

## ವಯಸ್ಕರ ಶಿಕ್ಷಣ

ಗ್ರಾಮೀಣ ಪ್ರದೇಶಗಳಲ್ಲಿ ವಿವೇಚನಾಯುಕ್ತ ಶಿಕ್ಷಣ ಚಳುವಳಿಯನ್ನು ಹುಟ್ಟುಹಾಕುವುದು 'ಸಶಾಚ'ದ ಉದ್ದೇಶ. ಅದಕ್ಕಾಗಿ ಅದು ಸಮುದಾಯದಲ್ಲಿರುವ ವ್ಯಕ್ತಿಗಳನ್ನು ಬೇರೆ ಬೇರೆ ಘಟಕಗಳಾಗಿ ವಿಂಗಡಿಸಿಕೊಳ್ಳುವುದು. ಅವರವರ ಅಗತ್ಯಕ್ಕೆ ತಕ್ಕಂತೆ ಅವರಿಗೆ ಅಕ್ಷರಾಭ್ಯಾಸವನ್ನೋ ಅಥವಾ ಅದಕ್ಕಿಂತ ಮೇಲ್ಪಟ್ಟ ಶಿಕ್ಷಣವನ್ನೋ ನೀಡಲಾಗುವುದು. ವಯಸ್ಕ ನಿರಕ್ಷರಸ್ಥರು ಈ ದೃಷ್ಟಿಯಿಂದ ತುಂಬ ಮುಖ್ಯವಾಗಿ ಗಮನಿಸಬೇಕಾದಂಥವರು. ಏಕೆಂದರೆ 'ಸಶಾಚ'ದ ಯಶಸ್ಸು ಈ ವಯಸ್ಕರು ತಮ್ಮ ಸುತ್ತಲ ಸಾಮಾಜಿಕ ಸಂದರ್ಭದ ಅರಿವು ಮತ್ತು ಕ್ರಿಯಾತ್ಮಕ ಸಂಘಟನೆಯ ಅಗತ್ಯವನ್ನು ಅರ್ಥಮಾಡಿಕೊಳ್ಳುವುದನ್ನು ಅವಲಂಬಿಸಿದೆ. ನಮ್ಮದು ಒಂದು ಸಮಗ್ರವಾದ ದೃಷ್ಟಿ. ಆದುದರಿಂದ ಒಬ್ಬ ವ್ಯಕ್ತಿ ಮತ್ತು ಒಂದು ಅಖಂಡ ಸಮುದಾಯ ಸಮಗ್ರವಾಗಿ ಈ ಚಳುವಳಿಯಲ್ಲಿ ಪಾಲ್ಗೊಳ್ಳದಿದ್ದರೆ ನಮ್ಮ ಉದ್ದೇಶ ಪೂರ್ಣವಾಗಿ ಫಲಿಸುವುದಿಲ್ಲ. ಹಾಗೆ ಸಮಗ್ರ ಪಾಲ್ಗೊಳ್ಳುವಿಕೆಯಿಂದ ಮಾತ್ರ ಈಗ ಉಪಸ್ಥಿತವಿರುವ ಶಿಕ್ಷಣ ವ್ಯವಸ್ಥೆಯನ್ನು ಸಮಗ್ರವಾಗಿ ಬದಲಿಸಿ ಫಲಪ್ರದಗೊಳಿಸುವುದು ಸಾಧ್ಯವಾಗುವುದು.

ಆದುದರಿಂದ 16 ರಿಂದ 35ರ ವಯೋಮಾನದಲ್ಲಿರುವ ಎಲ್ಲ ವಯಸ್ಕರನ್ನು ಅಕ್ಷರಸ್ಥರು ಮತ್ತು ಸಂಖ್ಯೆಬಲ್ಲವರನ್ನಾಗಿ ಒಂದು ನಿಶ್ಚಿತವಾದ ಅವಧಿಯಲ್ಲಿ ಅಂದರೆ 12 ರಿಂದ 18 ತಿಂಗಳ ಕಾಲಾವಧಿಯಲ್ಲಿ ಮಾಡುವುದು 'ಸಶಾಚ'ದ ಉದ್ದೇಶ. ಇದಕ್ಕಾಗಿ ಸ್ವಯಂ ಸೇವಕರು ಪೂರ್ವಭಾವೀ ತರಬೇತಿ ಪಡೆದಿರುವರು. ಮತ್ತು ಮಕ್ಕಳಿಂದ ವಯಸ್ಕರೂ, ವಯಸ್ಕರಿಂದ ಮಕ್ಕಳೂ ಪರಸ್ಪರ ಶಿಕ್ಷಣ ಪಡೆಯಬೇಕು ಹಾಗೆ ಪಡೆಯುವುದು ತಪ್ಪಲ್ಲ ಎಂಬ ಅಭಿಪ್ರಾಯವನ್ನು ಸಮುದಾಯದಲ್ಲಿ ಮೂಡಿಸಲು ಅವರು ಶ್ರಮಿಸುವರು. ಇನ್ನೂ ವಿವರಿಸಬೇಕೆಂದರೆ ಪ್ರತಿಯೊಬ್ಬನೂ ಪ್ರತಿಯೊಬ್ಬನಿಂದಲೂ ಕಲಿಯುವನು. ನಾವೆಲ್ಲರೂ ಏಕಕಾಲದಲ್ಲಿ ವಿದ್ಯಾರ್ಥಿಗಳೂ ಹೌದು, ಶಿಕ್ಷಕರೂ ಹೌದು. ಈ ಮನೋಧರ್ಮವು ರೂಪಿತವಾದಾಗ ಪ್ರತಿಯೊಂದು ಕುಟುಂಬವೂ ತನ್ನಷ್ಟಕ್ಕೇ ಒಂದು ಶಾಲೆಯಾಗಿ ಮಾರ್ಪಡುವುದು.

ಶಿಕ್ಷಣ ತರಗತಿಗಳಲ್ಲಿ ನಾವು ಬಳಸುವ ಸಮಸ್ಯಾ ಪರಿಹಾರ ವಿಧಾನವು ಕ್ರಮಬದ್ಧವಾಗಿದ್ದು, ವೈಜ್ಞಾನಿಕವಾಗಿದ್ದರೆ ನಿರಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುವಲ್ಲಿ ಸಾಕಷ್ಟು ಸಹಾಯವಾಗುತ್ತದೆ. ಇಂಥ ಕ್ರಮವು ಅನಕ್ಷರಸ್ಥರ ಕಲ್ಪನಾ ಸಾಮರ್ಥ್ಯವನ್ನೂ ಬೆಳೆಸುತ್ತದೆ ; ವಿಶ್ಲೇಷಣಾತ್ಮಕವಾಗಿ ಚಿಂತಿಸುವುದನ್ನು ಕಲಿಸುತ್ತದೆ. ಸದ್ಯದ ಸಾಮಾಜಿಕ ಸ್ಥಿತಿಗತಿಗಳಿಗೆ ಸೂಕ್ತವಾದ ಬದಲೀ ವ್ಯವಸ್ಥೆಗಳನ್ನು ಶೋಧಿಸಲು ಅವರಿಗೆ ಸಹಾಯ ಮಾಡುತ್ತದೆ. ಸಮೂಹ ಶಿಕ್ಷಣದಲ್ಲಿ ವ್ಯಕ್ತಿ ವ್ಯಕ್ತಿಗಳು ಪರಸ್ಪರ ಬೆರೆತು ಚರ್ಚಿಸಿ ಕಲಿಯುವುದರಿಂದ ಅವರ ಸಂಘಶಕ್ತಿಯು ತನ್ನಷ್ಟಕ್ಕೆ ತಾನೇ ಬಲಯುತವಾಗುತ್ತದೆ. ಮೇಲುಸ್ತರದ ನಾಯಕರನ್ನು ಅವರ ನತದೃಷ್ಟ ಸೋದರರ ಸೇವೆಗೆ ಸಮರ್ಥವಾಗಿ ಸಿದ್ಧಮಾಡುತ್ತದೆ. ಸಾಂಪ್ರದಾಯಿಕವಾದ ಹಳೆಯ ಮಾದರಿಗಳನ್ನು ಅಮೂಲಾಗ್ರವಾಗಿ ಬದಲಾಯಿಸಲು ಸಮರ್ಥವಾದಲ್ಲಿ ಮಾತ್ರ ಶಿಕ್ಷಣಕ್ಕೆ ಬೆಲೆ. ಇಂಥ ಶಿಕ್ಷಣ ಹೊಸ ಪ್ರಗತಿಶೀಲ ಜಾತ್ಯಾತೀತ ಮಾನವೀಯ ದೃಷ್ಟಿಕೋನಗಳನ್ನು ಮತ್ತು ಮೌಲ್ಯಗಳನ್ನು ಉತ್ಪಾದಿಸಬೇಕಾಗುವುದು ಮತ್ತು ಇಂಥ ಶಿಕ್ಷಣವು ಬದಲಾವಣೆಯ ಕ್ರಿಯೆಯನ್ನು ಜಾಗೃತಗೊಳಿಸಿ ಎಲ್ಲ ದುರ್ಬಲ ವರ್ಗದವರನ್ನು ಸಂಘಟಿಸಿ ಶಕ್ತಿ ನೀಡಿ ಅವರಜೀವನಮಟ್ಟವನ್ನು ಸಹಜವಾಗಿಯೇ ಮೇಲೆತ್ತುವುದು. ಹೊಸದಾಗಿ ಅಕ್ಷರಸ್ಥರಾದ ವಯಸ್ಕರು ವಿಶೇಷವಾದ ಆತ್ಮವಿಶ್ವಾಸದಿಂದ ಗ್ರಾಮ ಜೀವನದ ಮುಖ್ಯ ಸ್ರೋತದಲ್ಲಿ ಬೆರೆಯುವರು. ಉಪಸ್ಥಿತ ಸಾಮಾಜಿಕ ಪ್ರಜಾಪ್ರಭುತ್ವವಾದೀ ಜಾತ್ಯಾತೀತ ಸಮಾಜದಲ್ಲಿ ಪಾಲುಗಾರರಾಗಿ, ಸಫಲ ಜೀವನ ನಡೆಸುವರು.

ನಿರಕ್ಷರಸ್ಥರಾದ ವಯಸ್ಕರ ಉತ್ಸಾಹವನ್ನು ಶಿಕ್ಷಣದ ಬಗ್ಗೆ ಉಳಿಸಿಕೊಳ್ಳುವುದೇನೂ ಸುಲಭದ ಕೆಲಸವಲ್ಲ. ಇದಕ್ಕಾಗಿ ನಿರಂತರವಾಗಿ ಶ್ರಮಿಸಬೇಕಾಗುವುದು. ಶಾಲೆಗಳಲ್ಲಿ ಸುಸಂಸ್ಕೃತವಾದ, ನಿರ್ಭಯದ ಮುಕ್ತ ವಾತಾವರಣ

ವೊಂದನ್ನು ನಿರ್ಮಿಸಬೇಕಾಗುವುದು. ಇಂತಹ ವಾತಾವರಣ ನಿರ್ಮಿತಿಗೆ ನವನವೀನ ಉಪಾಯಗಳನ್ನು ಯೋಜಿಸುತ್ತಾ ಹೋಗಬೇಕಾಗುವುದು.

**ಕಸುಬು ಶಿಕ್ಷಣ (ವೃತ್ತಿ ಶಿಕ್ಷಣ)**

ಕೇವಲ ಓದುಬರಹವನ್ನು ಕಲಿತ ಮಾತ್ರಕ್ಕೇ ವ್ಯಕ್ತಿತ್ವ ನಿರ್ಮಾಣ ಸಾಧ್ಯವಿಲ್ಲ. ಓದುತ್ತಿರುವ ಮಕ್ಕಳಾಗಲೀ, ಓದುಬಿಟ್ಟಿರುವ ಮಕ್ಕಳಾಗಲೀ ಅವರ ಅಂತರ್ಗತ ಶಕ್ತಿಗಳನ್ನು ಬೆಳೆಸಿಕೊಳ್ಳಲು ಅವರಿಗಿರುವ ಅಲ್ಪಸ್ವಲ್ಪ ಸಂಪನ್ಮೂಲಗಳನ್ನೇ ಉಪಯುಕ್ತವಾಗಿ ಬಳಸಿಕೊಳ್ಳುವುದಕ್ಕೆ ಅಥವಾ ಅವರ ಜೀವನವನ್ನು ಉತ್ತಮ ಪಡಿಸಿಕೊಳ್ಳಲು ಆರ್ಥಿಕವಾಗಿ ಬೇರೆ ಸಾಧ್ಯತೆಗಳನ್ನು ಹುಡುಕಿಕೊಳ್ಳುವುದಕ್ಕೆ ಕೇವಲ ಓದು ಬರಹದ ಶಿಕ್ಷಣ ಉಪಯುಕ್ತವಾಗುವುದಿಲ್ಲ. ಅದರ ಜೊತೆ ಜೊತೆಗೇ ಅವರಿಗೆ ಅಗತ್ಯವಿರುವ ಕಸುಬಿನ ನೈಪುಣ್ಯವನ್ನೂ ಕಲಿಸುವುದರಿಂದ ಅವರ ವೃತ್ತಿ ಹೆಚ್ಚು ಪ್ರತಿಫಲ ಕೊಡುವಂತೆ ಮಾಡಲು ಸಾಧ್ಯ. ಇಂಥ ಶಿಕ್ಷಣವು ವಿದ್ಯಾರ್ಥಿಯ ವ್ಯಕ್ತಿತ್ವವನ್ನು ರೂಪಿಸುವುದು ಮಾತ್ರವಲ್ಲ, ಅವರಿಗೆ ತಮ್ಮ ಜೀವನವನ್ನು ಆತ್ಮವಿಶ್ವಾಸದಿಂದ ಆರಂಭಿಸಲು ಅಗತ್ಯವಾದ ನ್ಯಾಯಬದ್ಧ ಸ್ವಾಭಿಮಾನವನ್ನೂ ತಾನೂ ಕೂಡ ಈ ಸಾಮಾಜಿಕ ಪರಿಸರವನ್ನು ಪರಿಣಾಮಕಾರಿಯಾಗಿ ಮತ್ತು ಧನಾತ್ಮಕವಾಗಿ ಬದಲಿಸುವಲ್ಲಿ ನನ್ನ ಕಾಣಿಕೆ ನೀಡಬಲ್ಲೆ ಎಂಬ ನಂಬಿಕೆಯನ್ನು ಮೂಡಿಸಬಲ್ಲದು.

ಈ ಗುರಿಯನ್ನು ಸಾಧಿಸಲೋಸುಗ ಆಯಾಯ ಗ್ರಾಮೀಣ ಪ್ರದೇಶದ ಸ್ಥಳೀಯ ಕಸುಬಿನ ನೈಪುಣ್ಯಗಳನ್ನು ಮೊದಲು ಪಟ್ಟಿಮಾಡಿಕೊಳ್ಳಬೇಕು. ಆ ಪ್ರದೇಶಕ್ಕೆ ಅಗತ್ಯವೆನ್ನಿಸುವ ಹೊಸ ಬದುಕಿನ ನೈಪುಣ್ಯಗಳನ್ನು ಗುರ್ತಿಸಿಕೊಳ್ಳಬೇಕು. ಅವುಗಳನ್ನು ಮತ್ತಷ್ಟು ಅಭಿವೃದ್ಧಿಪಡಿಸುವುದು ಹೇಗೆ ಎಂದು ಯೋಚಿಸಿ ಸೂಕ್ತ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು. ಇದಕ್ಕಾಗಿ ಸರ್ಕಾರದ, ಸ್ವಯಂಸೇವಾ ಘಟಕಗಳ ಮತ್ತು ಖಾಸಗೀ ಸಂಸ್ಥೆಗಳ ಸಹಕಾರವನ್ನು ಪಡೆಯಬೇಕು. ವೃತ್ತಿ ಶಿಕ್ಷಣ ನೀಡಲು ನಾವು ಆರಿಸಿಕೊಳ್ಳುವ ವರ್ಗ ಸಹಜವಾಗಿಯೇ ದುರ್ಬಲವರ್ಗ. ಅವರಲ್ಲಿ ಶಾಲೆಬಿಟ್ಟವರು, ಹದಿಹರಯದವರು ನಮ್ಮ ಕಕ್ಷೆಯಲ್ಲಿ ಬರುತ್ತಾರೆ. ಇದಕ್ಕೆ ಪೂರ್ವಭಾವಿಯಾಗಿ ಪ್ರಾಥಮಿಕ ಶಾಲೆಗಳಲ್ಲಿ ಕೂಡ ಗಾಂಧಿಯವರ 'ಮೂಲ ಶಿಕ್ಷಣ ತತ್ವ'ಕ್ಕೆ ಅನುಸಾರವಾಗಿ 'ಕಲಿಕೆಯ ಜೊತೆ ಗಳಿಕೆ' ಎಂಬ ವಿಚಾರದ ಅನುಷ್ಠಾನವಾಗಿ ವೃತ್ತಿ ಶಿಕ್ಷಣವನ್ನು ಅಳವಡಿಸಬೇಕು.

ಸದ್ಯದಲ್ಲಿ ಎನ್. ಎಫ್. ಸಿ. ಇ–ಇದಕ್ಕೆ ಸಂಬಂಧಿಸಿದ ಪೂರಕ ಸಾಹಿತ್ಯ ಹಾಗೂ ವಿವರಗಳನ್ನು ಸಂಗ್ರಹಿಸುತ್ತಿದೆ. ಜೊತೆಗೆ ಸರ್ಕಾರ ಹಾಗೂ ಸ್ವಯಂಸೇವಾ ಸಂಸ್ಥೆಗಳು ದುರ್ಬಲ ವರ್ಗಗಳಿಗಾಗಿ ನಡೆಸುತ್ತಿರುವ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿನ ಉಪಯುಕ್ತ ಅಂಶಗಳನ್ನು ಸಂಗ್ರಹಿಸುತ್ತಿದೆ.

**ಸಾಂಸ್ಕೃತಿಕ ಚಟುವಟಿಕೆಗಳು**

ದುರ್ಬಲ ವರ್ಗದ ಮಾನಸಿಕ ಶಕ್ತಿಯನ್ನು ಚುರುಕುಗೊಳಿಸದೇ, ಅವರ ಮನಸ್ಸನ್ನು ಬದಲಾವಣೆಗೆ ಹದಗೊಳಿಸದೇ ದುರ್ಬಲ ವರ್ಗದ ಬದುಕನ್ನು ಉತ್ತಮ ಗೊಳಿಸಲು ನಾವು ಮಾಡುವ ಯಾವುದೇ ಕಾರ್ಯಕ್ರಮವೂ ಯಶಸ್ವಿಯಾಗಲಾರದು. ಪ್ರಭಾವಿ ಗುಂಪುಗಳು ಅತ್ಯಂತ ಸೂಕ್ಷ್ಮ ರೀತಿಯಲ್ಲಿ ಇವರ ಮೇಲೆ ತಮ್ಮ ನಂಬಿಕೆ ಗಳನ್ನೂ, ಮೌಲ್ಯಗಳನ್ನೂ, ಧೋರಣೆಗಳನ್ನೂ, ಹೇರಿರುತ್ತವೆ. ದುರ್ಬಲ ವರ್ಗದ ಎಲ್ಲ ಚಟುವಟಿಕೆಗಳೂ ಉಳ್ಳವರ ಆಸೆಗಳನ್ನು, ಆಸಕ್ತಿಗಳನ್ನು ಪೂರೈಸುವಂತೆ ರೂಪಿಸಲ್ಪಟ್ಟಿರುತ್ತವೆ. ಯಥಾಸ್ಥಿತಿಯನ್ನು ಒಪ್ಪಿಕೊಳ್ಳುವಂತೆ, ಯಾಂತ್ರೀಕೃತ ಬದುಕಿಗೆ ಒಗ್ಗಿಹೋಗುವಂತೆ, ಅವರ ಆಲೋಚನಾ ಕ್ರಮವನ್ನು ಕುಂಠಿತಗೊಳಿಸಲಾಗು ತ್ತದೆ. ಅವರನ್ನು ಈ ಸ್ಥಿತಿಯಿಂದ ಮುಕ್ತಗೊಳಿಸಲು, ಹೊಸ ವಾತಾವರಣ ವೊಂದನ್ನು ಸೃಷ್ಟಿ ಮಾಡಲು ವೈವಿಧ್ಯಮಯವಾದ, ಬಹು ಆಯಾಮಗಳನ್ನುಳ್ಳ ಅನೇಕ ಸಾಂಸ್ಕೃತಿಕ ಚಟುವಟಿಕೆಗಳ ಕಡೆಗೆ ಅವರ ಗಮನವನ್ನು ನಾವು ಸೆಳೆಯಬೇಕು.

ಒಂದು ಜನಾಂಗದ ಸಂಸ್ಕೃತಿಯನ್ನು ಅವರ ಜೀವನ ವಿಧಾನ, ನಂಬಿಕೆಗಳು, ಸಂಪ್ರದಾಯಗಳು, ಧೋರಣೆಗಳು, ಆಲೋಚನೆಗಳು ಹಾಗೂ ವಿಧಿವಿಧಾನಗಳ ಮೂಲಕ ನಾವು ಗುರ್ತಿಸಬಹುದು. ಈ ಎಲ್ಲವೂ ಕೂಡಿ ಸಂಸ್ಕೃತಿ ರೂಪಗೊಳ್ಳುತ್ತದೆ. ಇದು ಜಗತ್ತಿನ ಅವರ ಗ್ರಹಿಕೆಯನ್ನು ರೂಪಿಸುತ್ತದೆ. ಹಾಗೆಯೇ ಸಾಮಾಜಿಕ ನೀತಿ ನಿಯಮಗಳನ್ನು ನಿಯಂತ್ರಿಸುತ್ತದೆ. ತಮ್ಮ ಬದುಕಿನ ಪರಿಣಾಮಗಳಿಗೆ ಸಾಮಾಜಿಕ ಹಾಗೂ ಧಾರ್ಮಿಕ ಒಪ್ಪಿಗೆಗಳನ್ನು ಪಡೆಯುವಂತೆ ಒತ್ತಾಯಿಸುತ್ತದೆ. ಸಾಂಸ್ಕೃತಿಕ ಚಟುವಟಿಕೆಗಳು ಕೇವಲ ಕಥಾರೂಪಗಳ ಅಭಿವ್ಯಕ್ತಿ ಮಾತ್ರವಲ್ಲ, ಬದುಕಿನ ಗ್ರಹಿಕೆ ಯನ್ನು ಬದಲಾಯಿಸಬಲ್ಲಂಥ ಶಕ್ತಿ ಉಳ್ಳಂಥವು. ಇವುಗಳ ಪ್ರಭಾವ ವ್ಯಕ್ತಿ ಹಾಗೂ ಸಮಾಜದ ಮೇಲೆ ಗಾಢವಾಗಿರುತ್ತದೆ. ರೂಢಿಗತ ಆಲೋಚನೆಗಳಿಂದ ಮುಕ್ತವಾಗಿ, ಇಡೀ ಮಾನವ ಸಮುದಾಯದಲ್ಲಿ ಉಪಯುಕ್ತವಾಗುವಂತಹ ಹೊಸ ಆಲೋಚನಾ ಕ್ರಮವನ್ನು ರೂಪಿಸಿಕೊಳ್ಳಲು ಇದು ನೆರವಾಗುತ್ತದೆ. ಸಾಂಸ್ಕೃತಿಕ ಚಟುವಟಿಕೆಗಳ ಜೊತೆ ಜೊತೆಗೇ ಕೆಲವು ಮೂಲಭೂತ ನಂಬಿಕೆಗಳು ಹಾಗೂ ಸಾರ್ವತ್ರಿಕ ಮೌಲ್ಯ ಗಳ ಬಗೆಗಿನ ಚರ್ಚೆಯೂ ನಿರಂತರವಾಗಿ ನಡೆಯಬೇಕು. ಪರಿಣಾಮವಾಗಿ ಇಡೀ ಸಮುದಾಯದಲ್ಲಿ ಕೆಲವು ಮೂಲಭೂತ ನಂಬಿಕೆಗಳು ಹಾಗೂ ಸಾರ್ವತ್ರಿಕ ಮೌಲ್ಯಗಳು ನೆಲೆಗೊಳ್ಳುತ್ತವೆ.

ಸಾಂಸ್ಕೃತಿಕ ಚಟುವಟಿಕೆಗಳ ಸ್ವರೂಪ ಸ್ಥಳೀಯ ಸಾಂಸ್ಕೃತಿಕ ಕಲಾರೂಪಗಳನ್ನೇ ಬಳಸಿ ರೂಪಗೊಳ್ಳಬೇಕು. ಹೊಸ ಪ್ರಕಾರಗಳನ್ನು ಪರಿಚಯಿಸುವಾಗಲೂ ಸಮುದಾಯದ ಸಕ್ರಿಯ ಪಾಲ್ಗೊಳ್ಳುವಿಕೆ ತೀರಾ ಅಗತ್ಯ. ಜನಸಮುದಾಯ ತಮ್ಮ ಕನಸುಗಳನ್ನು, ನಂಬಿಕೆಗಳನ್ನು, ನೋವು ನಲಿವುಗಳನ್ನು, ಆಸೆ ಆಕಾಂಕ್ಷೆಗಳನ್ನು ಕಲಾ

ಪ್ರಕಾರಗಳ ಮೂಲಕ ಅಭಿವ್ಯಕ್ತಿಸಿಕೊಳ್ಳುವುದು ಇದರಿಂದ ಸುಲಭ ಸಾಧ್ಯವಾಗುತ್ತದೆ. ಅವರಿಗೆ ಆ ಪ್ರಕಾರಗಳ ಮೇಲೆ ಸಂಪೂರ್ಣ ಪ್ರಭುತ್ವವಿದ್ದಾಗ ಮಾತ್ರ ಇದು ಸಾಧ್ಯ. ಆದ್ದರಿಂದ ಅವರ ಪಾಲ್ಗೊಳ್ಳುವಿಕೆ ತೀರಾ ಅಗತ್ಯ.

## 'ಸಶಾಚ'ದಲ್ಲಿ ಸಮೀಕ್ಷೆಯ ಪಾತ್ರ

ಸಾಮಾಜಿಕ ಸಮೀಕ್ಷೆಯೆಂದರೆ ಸಮಾಜದ ಒಳಸುಳಿಗಳನ್ನು ಅರ್ಥಮಾಡಿಕೊಳ್ಳುವುದು ಎಂದರ್ಥ. ಒಂದು ನಿರ್ದಿಷ್ಟ ಕ್ಷೇತ್ರದ ಜನರ ಸಾಮಾಜಿಕ ಸ್ಥಿತಿಗತಿಗಳ ಪರಿಚಯವನ್ನು ಖಚಿತವಾಗಿ ಹಾಗೂ ಕ್ರಮಬದ್ಧವಾಗಿ ನಾವು ಸಮೀಕ್ಷೆಗಳಿಂದ ಪಡೆಯಬಹುದು. ಸಮುದಾಯದ ಬೆಳವಣಿಗೆಗೆ ಉಪಯುಕ್ತವಾಗುವ ರಚನಾತ್ಮಕ ಕಾರ್ಯಕ್ರಮಗಳನ್ನು ರೂಪಿಸುವುದು ಈ ಸಮೀಕ್ಷೆಯ ಉದ್ದೇಶ. ಇದು ಸಮಾಜದ ಬೆಳವಣಿಗೆಗೆ ಅಡ್ಡಿಯಾಗಿರುವ, ನಿಷ್ಕ್ರಿಯವಾಗಿರುವ ಕಾರ್ಯಕ್ರಮಗಳನ್ನು ಗುರುತಿಸಬೇಕು. ಹಳೆಯ ಹಾಗೂ ಹೊಸ ಕಾರ್ಯಕ್ರಮಗಳ ತೌಲನಿಕ ವಿವೇಚನೆಯ ಮೂಲಕ ಕಾರ್ಯಕ್ರಮದ ಮಾದರಿಯೊಂದನ್ನು ಸಿದ್ಧಪಡಿಸಬೇಕು.

ಈಗಾಗಲೇ ಇಂಥದೊಂದು ಚಳುವಳಿ ಇರುವಂಥ ಹಳ್ಳಿಗಳಲ್ಲಿ ಹೊಸಬಗೆಯ ಶಿಕ್ಷಣದ ಮೂಲಕ ಜನ ಜಾಗೃತಿಗೊಂಡು ಸಂಘಟಿತವಾಗಿರುವಲ್ಲಿ ನಮ್ಮ ಕಾರ್ಯಕರ್ತರು ಸಮೀಕ್ಷೆ ನಡೆಸುತ್ತಾರೆ. ಅಲ್ಲಿಯ ಜನಸಮುದಾಯದ ಆರೋಗ್ಯ, ವಿದ್ಯಾಭ್ಯಾಸ, ಸಾಮಾಜಿಕ ಆರ್ಥಿಕ ಸ್ಥಿತಿಗತಿ, ಮೊದಲಾದವುಗಳ ಬಗ್ಗೆ ಖಚಿತ ತಿಳುವಳಿಕೆಯನ್ನು ಪಡೆಯಲು ಯತ್ನಿಸುತ್ತಾರೆ. ಈ ಪ್ರಯತ್ನದಲ್ಲಿ ಅಂದರೆ ವಿವರಗಳನ್ನು ಸಂಗ್ರಹಿಸುವಲ್ಲಿ ಸ್ಥಳೀಯ ಜನರ ನೆರವನ್ನೂ ಪಡೆದುಕೊಳ್ಳಬಹುದು. ಇಂಥ ಕೆಲಸಗಳಲ್ಲಿ ಅವರನ್ನು ತೊಡಗಿಸುವುದರಿಂದ ಅವರಿಗೆ ಬದುಕಿನ ಎಲ್ಲ ಕ್ಷೇತ್ರಗಳ ಪರಿಚಯ ಆದಂತಾಗುತ್ತದೆ.

## ಸಮಾಜ ಸಂಶೋಧನೆಯ ಪಾತ್ರ

ಸಮಾಜದ ಬದುಕಿನ ಬಗ್ಗೆ ನಮ್ಮ ಅರಿವನ್ನು ವಿಸ್ತರಿಸಲು, ಬೆಳೆಸಲು ಸಮಾಜ ಸಂಶೋಧನೆ ಅಗತ್ಯ. ಇದು ಸಮಾಜ ಜೀವನವನ್ನು ಅಭ್ಯಸಿಸುವ, ವಿಶ್ಲೇಷಿಸುವ ಒಂದು ವಿಧಾನ. ಕ್ರಮಬದ್ಧವಾಗಿ, ವೈಜ್ಞಾನಿಕವಾಗಿ, ತಾರ್ಕಿಕವಾಗಿ ಸಾಮಾಜಿಕ ಸತ್ಯಗಳನ್ನು ಶೋಧಿಸುವುದು ಈ ಸಂಶೋಧನೆಯ ಗುರಿ. ಇದು ಹೊಸ ಸಂಗತಿಗಳನ್ನು ಅನ್ವೇಷಿಸಲು, ಈಗಾಗಲೇ ಇರುವ ವಿಚಾರಗಳನ್ನು ಪರಾಮರ್ಶಿಸಲು, ಸಾಮಾಜಿಕ ಒಳಸಂಬಂಧಗಳನ್ನು ಗುರ್ತಿಸಲು, ಸಮಾಜವನ್ನು ನಿಯಂತ್ರಿಸುತ್ತಿರುವ ನಿಯಮಗಳನ್ನು ವಿವರಿಸಲು ಪ್ರಯತ್ನಿಸುತ್ತದೆ.

ಇದುವರೆಗೆ ಸಮಾಜ ವಿಜ್ಞಾನಿಗಳು ಈ ಸಮಾಜ ಸಂಶೋಧನೆಯ ವಿಧಾನ ಗಳನ್ನು ಅಷ್ಟು ಗಂಭೀರವಾಗಿ ಪರಿಗಣಿಸಿರಲಿಲ್ಲ. ಸಾಮಾಜಿಕ ಸಂದರ್ಭಗಳು ಮೇಲ್ನೋಟಕ್ಕೆ ಸರಳವಾಗಿ ಕಂಡರೂ, ವಾಸ್ತವವಾಗಿ ಅವು ಅಷ್ಟು ಸರಳವಾಗಿರು ವುದಿಲ್ಲ. ವೈಜ್ಞಾನಿಕವಾಗಿ ಹಾಗೂ ವಸ್ತುನಿಷ್ಠವಾಗಿ ಇದನ್ನು ಗ್ರಹಿಸಲು ಹೆಚ್ಚಿನ ಮಾನಸಿಕ ಸಿದ್ಧತೆ ಅಗತ್ಯ ಏನೇ ಆಗಲಿ ಇದೊಂದು ಒಳ್ಳೆಯ ಶೈಕ್ಷಣಿಕ ತರಬೇತಿ. ಇದರ ಪ್ರಾಮುಖ್ಯತೆಯನ್ನು ನಾವು ಅಲ್ಲಗಳೆಯಲಾಗುವುದಿಲ್ಲ. ಆದರೆ ಸಮುದಾಯಕ್ಕೆ ಹೊರಗಿನವನೊಬ್ಬ ಎಷ್ಟರ ಮಟ್ಟಿಗೆ ವಸ್ತುನಿಷ್ಠನಾಗಿರಲು ಸಾಧ್ಯ ? ಆತ ಸಂಪೂರ್ಣ ಹೊರಗಿನವನಾದಲ್ಲಿ ಆ ಸಮಾಜದ ತುಡಿತಗಳನ್ನು ಸಮಗ್ರವಾಗಿ ಗ್ರಹಿಸಲು ಸಾಧ್ಯವೇ ?

ನಾವು ಈ ಸಂದರ್ಭದಲ್ಲಿ ಪ್ರಜ್ಞಾಪೂರ್ವಕ ಸಂಶೋಧನೆಯನ್ನು ಕೈಗೊಳ್ಳು ತ್ತೇವೆ. ಇದು ದುರ್ಬಲ ವರ್ಗದ ಅಂತರ್ಗತ ಶಕ್ತಿಸಾಮರ್ಥ್ಯಗಳನ್ನು ಪರಿಣಾಮ ಕಾರಿಯಾಗಿ ಹೊರಹೊಮ್ಮಿಸುವಲ್ಲಿ ಸಹಕಾರಿಯಾಗುತ್ತದೆಂದು ನಮ್ಮ ನಂಬಿಕೆ. ಇದರಿಂದ ಅವರು ತಮ್ಮನ್ನು ತಾವು ಅರ್ಥಮಾಡಿಕೊಳ್ಳುವ, ತಮ್ಮ ಹಕ್ಕು ಬಾಧ್ಯತೆ ಗಳನ್ನು ಅರಿತುಕೊಳ್ಳುವ ಶಕ್ತಿ ಪಡೆದುಕೊಳ್ಳುತ್ತಾರೆ. ಜಗತ್ತನ್ನು ನೋಡುವ ಅವರ ದೃಷ್ಟಿ ಬದಲಾಗುತ್ತದೆ. ಯಾರನ್ನೂ ಅವಲಂಬಿಸದೆ ತಮ್ಮನ್ನು ತಾವೇ ರಕ್ಷಿಸಿಕೊಳ್ಳಲು ಸಮರ್ಥರಾಗುತ್ತಾರೆ.

ಸಂಶೋಧಕ ಮೊದಲು ಆ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಸಾಮಾಜಿಕ ಪರಿಸರ ವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಅದಕ್ಕೆ ಅನುಗುಣವಾಗಿ ತನ್ನನ್ನು ಹೊಂದಿಸಿಕೊಳ್ಳಬೇಕು. ಆ ಮೂಲಕ ಅಲ್ಲಿನ ಸಮಸ್ಯೆಗಳ ವಿಶ್ಲೇಷಣೆಗೆ ತೊಡಗಬೇಕು. ಪ್ರಜ್ಞಾಬದ್ಧ ಸಂಶೋಧನೆ ಸಮಸ್ಯೆಗಳ ಪ್ರಾಥಮಿಕ ಹಂತವನ್ನು ವಿಶ್ಲೇಷಿಸುವುದರತ್ತ ಹೆಚ್ಚು ಗಮನ ನೀಡಬೇಕು. ಇದು ನಮಗೆ ಸಮಸ್ಯೆಯ ಆಳ-ಅಗಲಗಳನ್ನು ಪರಿಚಯ ಮಾಡಿಕೊಡುತ್ತದೆ. ಈ ಅಭ್ಯಾಸದ ಮೂಲಕ ದುರ್ಬಲ ವರ್ಗಗಳ ಏಳಿಗೆ ನಮ್ಮ ಗುರಿಯಾಗಬೇಕು. ನಾಡಿನಲ್ಲಿ ದುರ್ಬಲ ವರ್ಗ ಒಂದು ಪ್ರತ್ಯೇಕ ಗುಂಪಾಗಿ ಉಳಿಯದೆ ಮುಖ್ಯ ಪ್ರವಾಹದಲ್ಲಿ ಒಂದಾಗುವಂತಾಗಬೇಕು. ದುರ್ಬಲ ವರ್ಗ ನ್ಯಾಯಬದ್ಧವಾದ ಎಲ್ಲ ಹಕ್ಕುಗಳನ್ನೂ ಪಡೆಯುವಂತಾಗಬೇಕೇ ಹೊರತು ಅವರು ಶೋಷಣೆಗೆ ಗುರಿಯಾಗಬಾರದು.

ಸಮಗ್ರವಾದ ಪ್ರಗತಿಯು 'ಸಶಾಚ'ದ ಗುರಿ. ಇದರಲ್ಲಿ ನಾವು ಶೈಕ್ಷಣಿಕ, ಪ್ರಕೃತಿವಿಜ್ಞಾನ, ಸಮಾಜವಿಜ್ಞಾನ ಶಾಖೆಗಳ ನಿಪುಣರನ್ನು ತೊಡಗಿಸಿಕೊಳ್ಳುತ್ತೇವೆ. ಸಮುದಾಯ ಶಿಕ್ಷಣಕ್ಕೆ ಆರಿಸಿಕೊಂಡ ಕ್ಷೇತ್ರದ ಜನತೆಗೆ ಅವರು, ತಮ್ಮ ಕೈಲಾದಷ್ಟು ಸಹಾಯ ಮಾಡುತ್ತಾರೆ. ಹೊಸ ಶಿಕ್ಷಣ ವಿಧಾನಗಳನ್ನು ರೂಪಿಸುವಲ್ಲಿ ಲಭ್ಯವಿರುವ ಆ ಪರಿಸರದ ಸಂಪನ್ಮೂಲಗಳನ್ನು ಬಳಸಿಕೊಳ್ಳುವುದರಲ್ಲಿ ಸ್ಥಳೀಯ ಜನರನ್ನು ಸೂಕ್ತ

ತರಬೇತಿಯಿಂದ ಸಿದ್ಧಮಾಡುವಲ್ಲಿ ಸಮಾಜದ ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ಎದುರಿಸಲು ನವೀನ ವಿಧಾನಗಳನ್ನು ಅವರಿಗೆ ಕಲಿಸಿಕೊಡುವಲ್ಲಿ, ಸಮಾಜವನ್ನು ಹೊಸ ಅಗತ್ಯಕ್ಕೆ ತಕ್ಕಂತೆ ಪುನರ್ರಚಿಸುವಲ್ಲಿ ಈ ನಿಪುಣ ಶಿಕ್ಷಣವೇತ್ತರು ಅವರಿಗೆ ಸಹಾಯ ಮಾಡುತ್ತಾರೆ. 'ಸಶಾಚ'ವು ಜನತೆಯ ಚಳುವಳಿಯನ್ನು ರೂಪಿಸುವಲ್ಲಿ ಪರಿಣಾಮ ಕಾರಿಯಾಗಿ ಕೆಲಸ ಮಾಡುವುದಕ್ಕೆ ವಿಶೇಷವಾದ ಸಂಶೋಧನೆ ಮತ್ತು ಸಂಬಂಧಪಟ್ಟ ಸಾಹಿತ್ಯ ಸಾಮಗ್ರಿಗಳ ಅಗತ್ಯವಿದೆ. ನಾವು ಈಗಾಗಲೇ ಅಂಥ ಸಾಹಿತ್ಯದ ಮತ್ತು ಸಂಶೋಧನೆಯ ಕೆಲವು ಪ್ರಕಾರಗಳನ್ನು ಪಟ್ಟಿಮಾಡಿ ಕೊಟ್ಟಿದ್ದೇವೆ. ನಮಗೀಗ ತತ್ವಬದ್ಧರಾದ, ಸಮರ್ಥರಾಗಿ ಸ್ವಯಂಪ್ರೇರಿತರಾಗಿ, ಸಂಪೂರ್ಣವಾಗಿ ಅಥವಾ ಅಲ್ಪ ಕಾಲಾವಧಿಯಲ್ಲಿ ಕೆಲಸ ಮಾಡುವಂಥ ನಿಷ್ಠಾವಂತ ಜನರು ಬೇಕಾಗಿದ್ದಾರೆ.

1) ಸಂಶೋಧನಾ ಸಂವಿಧಾನ.

2) ಸಮುದಾಯ ಶಿಕ್ಷಣಕ್ಕೆ ಆಯ್ಕೆಯಾಗಿರುವ ಗ್ರಾಮೀಣ ಪ್ರದೇಶಗಳ ಶೈಕ್ಷಣಿಕ ಸಾಮಾಜಿಕ ಮತ್ತು ಆರ್ಥಿಕ ಸಮೀಕ್ಷೆಗಳು.

3) ಸಮುದಾಯ ಶಿಕ್ಷಣಕ್ಕೆ ಆಯ್ಕೆ ಮಾಡಿದ ಕ್ಷೇತ್ರಗಳ ಜನತೆಯ ಆರೋಗ್ಯ ಪರಿಸ್ಥಿತಿ.

4) ಸಮುದಾಯ ಶಿಕ್ಷಣ (ಶಾಲೆ) ಮತ್ತು ಸಾಮಾಜಿಕ ಬದಲಾವಣೆ.

5) ಸಮಾಜ ರಚನೆ ಮತ್ತು ಪ್ರಗತಿ.

6) ಪ್ರಗತಿ ಮತ್ತು ರಾಜಕೀಯ ಶಕ್ತಿ.

7) 1950ರ ಸಮುದಾಯ ಪ್ರಗತಿ ಕಾರ್ಯಕ್ರಮಗಳ ವಿಫಲತೆ.

8) ಅಲಕ್ಷಿತ ಗ್ರಾಮೀಣ ಸಮಾಜದ ಅಂತಃರಚನೆ.

9) ಮೂಲಶಿಕ್ಷಣ–ಒಂದು ಗಾಂಧೀತತ್ವ.

10) ನಗರ ಮತ್ತು ಗ್ರಾಮೀಣ ಪರಿಸರದ ನಡುವಿನ ಕಂದಕ–ಕಾರಣಗಳು ಮತ್ತು ಪರಿಹಾರೋಪಾಯಗಳು.

11) ವೈಜ್ಞಾನಿಕ ಮನೋಧರ್ಮ ಮತ್ತು ಗ್ರಾಮೀಣ ಭಾರತದ ಬದಲಾವಣೆ.

12) 'ಸಶಾಚ'ದ ರಾಜಕೀಯ ನೆಲೆ.

13) ಗ್ರಾಮೀಣ ಶಾಲೆಗಳಿಗೆ ಒಂದು ಹೊಸ ಪಠ್ಯಕ್ರಮ.

14) ಬಾಲವಾಡಿ ಅಧ್ಯಾಪಕರ ತರಬೇತಿಗಾಗಿ ಒಂದು ಕೈಪಿಡಿ.

15) ಸ್ವಯಂ ಸೇವಕರ ಶಿಕ್ಷಣಕ್ಕಾಗಿ ಕೈಪಿಡಿ.

16) ವಯಸ್ಕರ ಶಿಕ್ಷಣಕ್ಕಾಗಿ ಮೌಲ್ಯಗಳು, ಅದಕ್ಕೆ ಸಂಬಂಧಪಟ್ಟ ಸಾಹಿತ್ಯ ಮತ್ತು ಶಿಕ್ಷಣಕ್ರಮ.

17) ಗ್ರಾಮೀಣ ಸಂಘಟನೆಗಳನ್ನು ರೂಪಿಸುವ, ಬೆಳೆಸುವ ಮತ್ತು ಬಲ ಪಡಿಸುವ ಕಾರ್ಯವಿಧಾನಗಳು.

18) ಜಾನಪದ ಕಥೆಗಳು.

19) ಬಾಲವಾಡಿಗಳಿಗಾಗಿ ಶಿಶುಪ್ರಾಸಗಳು.

20) ಕಲಿಕೆಯ ಜೊತೆಗಳಿಕೆ—ಉಪಲಬ್ಧ ಮಾಹಿತಿಗಳ ಅಭ್ಯಾಸ.

21) ಸಂಘಟನೆಗಳ ನಾಯಕನಿಗೆ ನಾಯಕತ್ವ ತರಬೇತಿ.

22) ಗ್ರಾಮೀಣ ಜನತೆಗೆ ಪ್ರಯೋಗದ ಬಗ್ಗೆ ವಿವರಣೆ ಮತ್ತು ಪ್ರಾಯೋಗಿಕ ಅಭ್ಯಾಸ.

23) ಮಗುವಿನ ಬೆಳವಣಿಗೆಯ ಬಗ್ಗೆ ಕೈಪಿಡಿ.

24) ಉದ್ದೇಶ ಮತ್ತು ಅದನ್ನು ಸಾಧಿಸುವಾಗ ಎದುರಿಸುವ ಸಮಸ್ಯೆಗಳ ಪರಿಹಾರ–ಉಪಲಬ್ಧ ಮಾಹಿತಿಗಳ ಅಭ್ಯಾಸ.

25) ಗ್ರಾಮೀಣ ಯುವಕರಿಗೆ ವೃತ್ತಿ ಶಿಕ್ಷಣ–ಒಂದು ಹೊಸತಂತ್ರ.

26) ವಯಸ್ಕರ ಶಿಕ್ಷಣ ಮತ್ತು ವೈಜ್ಞಾನಿಕ ಶಿಕ್ಷಣ ವಿಧಾನ.

27) ಬೀದಿನಾಟಕ ಮತ್ತು ಬೊಂಬೆಯಾಟಗಳು.

28) ಸುಲಭ ಬೆಲೆಯ ಮಾಧ್ಯಮಗಳ ಉಪಯೋಗ ಮತ್ತು ಅವುಗಳ ಮೂಲಕ ಪರಿಣಾಮಕಾರೀ ಸಂವಹನ.

29) ಮೌಲ್ಯಮಾಪನ.

30) ಕರ್ನಾಟಕದಲ್ಲಿ ಇರುವ ಶಿಕ್ಷಣ ತರಬೇತಿ ಶಾಲೆಗಳ ಅಧ್ಯಯನ.

ಸಮುದಾಯ ಶಾಲಾ ಚಳುವಳಿ' ಉತ್ತಮ ಶಿಕ್ಷಣಕ್ಕಾಗಿ, ನಡೆಯುವ ಒಂದು ಜನತಾ ಚಳುವಳಿ. ಇದರ ಗುರಿ ಜನ ಶಕ್ತಿಯನ್ನು ರೂಪಿಸುವುದು. ಅದರಲ್ಲೂ ನತದೃಷ್ಟ ದುರ್ಬಲ ವರ್ಗದ ನಡುವೆ ಜನಶಕ್ತಿಯನ್ನು ರೂಪಿಸುವುದು ಪ್ರಧಾನ ಉದ್ದೇಶ. ತನ್ಮೂಲಕ ಸಾಮಾಜಿಕ ಬದಲಾವಣೆ ಯೊಂದನ್ನು ತರಲು ಈ ಚಳುವಳಿ ಪ್ರಯತ್ನಿಸುವುದು.